CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಜನವರಿ ೨೭, ೨೦೦೫ (ಮಾಘ ೭, ಶಕ ವರ್ಷ ೧೯೨೬) | ಸಂಚಿಕೆ ೪ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**
**ನೇಮಕಾತಿ ಆದೇಶ**
**ಜಿಲ್ಲಾ ನೋಂದಣಾಧಿಕಾರಿಗಳು, ಬೀದರ್ ಇವರ ನಡವಳಿಗಳು**

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬೀದರ್ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ದ್ವಿತೀಯ ದರ್ಜೆ ಸಹಾಯಕರನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ :**
1. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ಈ ಕಛೇರಿಯಿಂದ ಬರೆದಿರುವ ಪತ್ರ ಸಂಖ್ಯೆ: ಸಿಬ್ಬಂದಿ:ಸಿಆರ್:2001-2002 (fax) ದಿನಾಂಕ: 11.01.2002.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್:13:ಎಸ್ಬಿಸಿ:2001 ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
3. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: EST-1-273/2001-2002 ದಿನಾಂಕ: 1.8.2002 (ದಿನಾಂಕ: 8.8.02 ರ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ).
4. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಂತಿಮ ಆಯ್ಕೆಪಟ್ಟಿ ಸಂಖ್ಯೆ: EST-1-273/01-02 ದಿನಾಂಕ: 23.11.2004
5. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST-1-273/01-02 ದಿನಾಂಕ: 14.12.04.

**ಪ್ರಸ್ತಾವನೆ:**

ಈ ಇಲಾಖೆಯ ಬೀದರ್ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಈ ಕಛೇರಿಯಿಂದ ಉಲ್ಲೇಖ (1) ರನ್ವಯ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು. ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ.ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1 | ಬೀದರ್ ಜಿಲ್ಲೆ | ಒಂದು | ಒಂದು | ಎರಡು |

ಈ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (3)ರ ಅಧಿಸೂಚನೆ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳು ಪರಿಶೀಲನೆಗೊಂಡ ನಂತರ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು Merit ಆಧಾರದ ಮೇಲೆ ಆಯ್ಕೆ ಮಾಡಿ ಅರ್ಹ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ

ಆಯುಕ್ತರು, ಬೆಂಗಳೂರು ಇವರು ಉಲ್ಲೇಖ (4) ರನ್ವಯ ದಿನಾಂಕ: 23.11.2004 ರಂದು ಪ್ರಕಟಿಸಿ, ತದನಂತರ ಈ ಕಛೇರಿಯಿಂದ ಉಲ್ಲೇಖ (1)ರ ಪತ್ರದಲ್ಲಿ ಮೇಲ್ಕಂಡಂತೆ ವರದಿ ಮಾಡಿದ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ ಕೆಳಕಂಡ ಅಭ್ಯರ್ಥಿಗಳನ್ನು ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಉಲ್ಲೇಖ (5)ರ ಅವರ ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್ ಮಾಡಿ ಸದರಿ ಅಭ್ಯರ್ಥಿಗಳನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆಗೆ ಕೆಳಕಂಡ ಅಭ್ಯರ್ಥಿಗಳನ್ನು ಸದರಿ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಜಿನೋಬಿ: ಸಿಬ್ಬಂದಿ:2004-05:1003 ದಿನಾಂಕ: 29ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (5)ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡುಬಂದ ಕೆಳಕಂಡ ಅಭ್ಯರ್ಥಿಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ. 3000-75-3450-100-4450-125-5450ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ. ಹಾಗೂ ಸದರಿ ಅಭ್ಯರ್ಥಿಗಳನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC/ ST | ಜನ್ಮ ದಿನಾಂಕ | 7.9.2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ-ತಿಂ-ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಭೀಮಶಾ S/o ಶಿವಪ್ಪ C/o ಸುಭಾಷಕಂಟಿ ಕೆ.ಪಿ.ಸಿ. ಡಿವಿಜನ್ ನಂ.1 ಬೀದರ್-585401 | SC | 05.06.1973 | 29.03.02 | S.S.L.C. 77.167 | ಉಪ ನೋಂದಣಿ ಕಛೇರಿ, ಬಸವ ಕಲ್ಯಾಣ ಬೀದರ್ ಜಿಲ್ಲೆ | ಪರಿಶಿಷ್ಟ ಜಾತಿ ಸಾಮಾನ್ಯ ಅಭ್ಯರ್ಥಿ ಮುಖ್ಯಪಟ್ಟಿ |

S.S.L.C. ಅಂಕಪಟ್ಟಿಯ ನೋಂದಣಿ ಸಂಖ್ಯೆ: 181323/ April 1989 (ವರ್ಷ)ದ ಪ್ರಕಾರ ಸದರಿ ಅಭ್ಯರ್ಥಿಯ ಜನ್ಮ ದಿನಾಂಕವು 05.06.1973 ಆಗಿರುತ್ತದೆ.

**ಜಿಲ್ಲಾ ನೋಂದಣಾಧಿಕಾರಿ**

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು, ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದುಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನು ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾ ವಿಧಿ) ಬರೆದುಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.

11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್ (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರ್‌ಪಡಿಸತಕ್ಕದ್ದು.
13. ಅಭ್ಯರ್ಥಿಯು ತಮ್ಮ ಜಾತಿ ಜನ್ಮ ದಿನಾಂಕ ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು. ಹಾಗೂ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಎಲ್ಲಾ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232/99 (ಶ್ರೀ ಬಿ. ಎಲ್ ನಾರಾಯಣ - Vs - ಕರ್ನಾಟಕ ರಾಜ್ಯ ಮತ್ತು ಇತರರು ) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದಲ್ಲ. ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು. ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ 232/99 ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧಳಾಗಿರುತ್ತೇನೆ ಎಂಬ ಬಗ್ಗೆ 20/- ರೂಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-3 ಅನ್ನು ಈ ಕಛೇರಿಗೆ ಬರೆದು ಕೊಡತಕ್ಕದ್ದು.
15. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
16. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS/CCA/ ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ದನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/- ರೂಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
17. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
18. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ಹಾಗೂ ಮಾಜಿ ಸೈನಿಕರ ಮೀಸಲಾತಿಯಲ್ಲಿ ಆಯ್ಕೆಗೊಂಡವರು ಮಾಜಿ ಸೈನಿಕರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
19. ಇದೇ ರೀತಿ ಯೋಜನಾ ನಿರಾಶ್ರಿತರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಯೋಜನಾ ನಿರಾಶ್ರಿತ ಅಭ್ಯರ್ಥಿಗಳಲ್ಲವೆಂದು ಮತ್ತು ಅಂಗವಿಕಲರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಅಂಗವಿಕಲ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
20. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
21. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
22. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
23. ಈ ನೇಮಕಾತಿಗಾಗಿ ಅರ್ಜಿಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ನಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ Establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/- ರೂಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-2 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
24. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ನಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೊಂದಣಾಧಿಕಾರಿ,
ಬೀದರ್ ಜಿಲ್ಲೆ, ಬೀದರ್.

ಪಿ.ಆರ್.116

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

## ನೇಮಕಾತಿ ಆದೇಶ

## ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಕಾವೇರಿ ಭವನ, 7ನೇ ಮಹಡಿ, ಜಲಮಂಡಳಿ ಕಟ್ಟಡ, ಬೆಂಗಳೂರು ಇವರ ನಡವಳಿಗಳು

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ದ್ವಿತೀಯ ದರ್ಜೆ ಸಹಾಯಕರನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್:13: ಎಸ್‌ಬಿಸಿ: 2001 ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.

2. ಈ ಕಛೇರಿಯ ಅಧಿಸೂಚನೆ ಸಂಖ್ಯೆ: EST-1-273/2001-02 ದಿನಾಂಕ: 1.8.2002 (ದಿನಾಂಕ: 8.8.2002ರ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ).
3. ಈ ಕಛೇರಿಯ ಅಂತಿಮ ಆಯ್ಕೆ ಪಟ್ಟಿ ಸಂಖ್ಯೆ: EST-1-273/2001-2002 ದಿನಾಂಕ: 23.11.2004.
4. ಈ ಕಛೇರಿಯ ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST-1-273/2001-02 ದಿನಾಂಕ: 14.12.2004

**ಪ್ರಸ್ತಾವನೆ:**

ಈ ಇಲಾಖೆಯ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುವುದಾಗಿ ಗುರುತಿಸಲ್ಪಟ್ಟ ಕಾರಣ ಈ ಬ್ಯಾಕ್‌ಲಾಗ್ ಹುದ್ದೆಗಳನ್ನು.

| ಕ್ರ.ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1 | ಬೆಂಗಳೂರು ಜಿಲ್ಲಾ ನೇಮಕಾತಿ ಘಟಕ | ನಾಲ್ಕು | ಎರಡು | ಆರು |

ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (1) ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (2)ರ ಈ ಕಛೇರಿಯ ಅಧಿಸೂಚನೆ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳು ಪರಿಶೀಲನೆಗೊಂಡ ನಂತರ ಉಲ್ಲೇಖ (1)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು Merit ಆಧಾರದ ಮೇಲೆ ಆಯ್ಕೆ ಮಾಡಿ ಅರ್ಹ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ಉಲ್ಲೇಖ (3) ರನ್ವಯ ದಿನಾಂಕ: 23.11.2004 ರಂದು ಪ್ರಕಟಿಸಿ, ತದನಂತರ ಮೇಲ್ಕಂಡಂತೆ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ ಅಷ್ಟೇ ಸಂಖ್ಯೆಯ ಕೆಳಕಂಡ ಅಭ್ಯರ್ಥಿಗಳನ್ನು ನೇಮಕ ಮಾಡುವ ಸಲುವಾಗಿ ಉಲ್ಲೇಖ (4)ರ ಈ ಕಛೇರಿಯ ಅಲಾಟ್‌ಮೆಂಟ್ ಆದೇಶದಲ್ಲಿ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕಕ್ಕೆ ಅಲಾಟ್ ಮಾಡಿದ ಕಾರಣ ಕೆಳಕಂಡ ಅಭ್ಯರ್ಥಿಗಳನ್ನು ಸದರಿ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: EST-1-273/2001-02 ದಿನಾಂಕ: 20ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (4)ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡುಬಂದ ಕೆಳಕಂಡ ಅಭ್ಯರ್ಥಿಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ. 3000-75-3450-100-4450-125-5450ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ. ಹಾಗೂ ಸದರಿ ಅಭ್ಯರ್ಥಿಗಳನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC/ ST | ಜನ್ಮ ದಿನಾಂಕ | 7.9.2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ-ತಿಂ-ದಿ | ವಿದ್ಯಾರ್ಹತೆ ಮತ್ತು ಶೇಕಡಾ ವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ರವಿ ಜಯವಂತ ಕಾಳೆ S/o ಜಯವಂತ್ ಕೆ.ಹೆಚ್. ಬಿ. ಕಾಲೋನಿ ಮನೆ ನಂ.2 ಜಮಖಂಡಿ-587302 ಜಿಲ್ಲೆ: ಬಾಗಲಕೋಟೆ | SC | 01.06.1970 | 32.03.06 | S.S.L.C. 79.000 | ಕೇಂದ್ರೀಯ ಅಭಿಲೇಖಾಲಯ ರಿಸಾಲ್ದಾರ್ ಸ್ಟ್ರೀಟ್ ಶೇಷಾದ್ರಿಪುರಂ, ಬೆಂಗಳೂರು (ಬೆಂಗಳೂರು ಜಿಲ್ಲಾ ನೇಮಕಾತಿ ಘಟಕ) | ಪರಿಶಿಷ್ಟ ಜಾತಿ ಸಾಮಾನ್ಯ ಅಭ್ಯರ್ಥಿ ಮುಖ್ಯಪಟ್ಟಿ |
| 2. | ಕಲ್ಲಿನಾಥ್ ಮಾಧವನವರ್ S/o ದೇವೆಂದ್ರಪ್ಪ ಮಾಧವನವರ್ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಗ್ರಾಮಾಂತರ ಜಿಲ್ಲೆ ನಂ. 280, 17ನೇ ಸಿ ಮೈನ್ ರೋಡ್, 3ನೇ ಬ್ಲಾಕ್ ರಾಜಾಜಿನಗರ ಬೆಂಗಳೂರು-560 010 | ST | 05.05.1968 | 34.4.02 | S.S.L.C. 77.833 | ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರ ಕಛೇರಿ, ಕಾವೇರಿ ಭವನ ಜಲಮಂಡಳಿ ಕಟ್ಟಡ ಬೆಂಗಳೂರು (ಬೆಂಗಳೂರು ಜಿಲ್ಲಾ ನೇಮಕಾತಿ ಘಟಕ) | ಪರಿಶಿಷ್ಟ ಪಂಗಡ ಸಾಮಾನ್ಯ ಅಭ್ಯರ್ಥಿ ಮುಖ್ಯಪಟ್ಟಿ |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 3. | ಭೀಮಪ್ಪ ದೊಡ್ಡಪ್ಪ ಪಾತ್ರೂಟ S/o ದೊಡ್ಡಪ್ಪ ಮು: ಪೋ: ಯಮಕನಮರಡಿ, ತಾ: ಹುಕ್ಕೇರಿ ಜಿ: ಬೆಳಗಾಂ-591245 | SC | 29.08.06 | 01.01.1973 | S.S.L.C. 76.167 | ಕೇಂದ್ರೀಯ ಅಭಿಲೇಖಾಲಯ, ಶೇಷಾದ್ರಿಪುರಂ, ಬೆಂಗಳೂರು, (ಬೆಂಗಳೂರು ಜಿಲ್ಲಾ ನೇಮಕಾತಿ ಘಟಕ) | ಪರಿಶಿಷ್ಟ ಜಾತಿ ಸಾಮಾನ್ಯ ಅಭ್ಯರ್ಥಿ ಮುಖ್ಯಪಟ್ಟಿ |
| 4. | ವಾಲು ಜೆ. ರಾಠೋಡ್ S/o ಜೇಮಲು C/o ಪ್ರತಾಪಚಂದ ರಾಠೋಡ್ ನಂ.39-68. ಗ್ರೌಂಡ್ ಫ್ಲೋರ್ 1ನೇ E ಕ್ರಾಸ್, 6ನೇ ಮೈನ್, ರೆಮ್ಕೋ ಲೇಔಟ್ ವಿಜಯನಗರ 2ನೇ ಸ್ಟೇಜ್ ಬೆಂಗಳೂರು-560040 | SC | 15.05.1971 | 31.03.22 | S.S.L.C. 75.833 | ಜಿಲ್ಲಾ ನೋಂದಣಿ ಕಛೇರಿ (DUS) ಇಂದಿರಾನಗರ ಬೆಂಗಳೂರು, (ಬೆಂಗಳೂರು ಜಿಲ್ಲಾ ನೇಮಕಾತಿ ಘಟಕ) | ಪರಿಶಿಷ್ಟ ಜಾತಿ ಸಾಮಾನ್ಯ ಅಭ್ಯರ್ಥಿ ಮುಖ್ಯಪಟ್ಟಿ |
| 5. | M. ರಂಗನಾಥ್ S/o ಮುದ್ದುಗೇರಯ್ಯ M.P. C/o K. N. ನಾರಾಯಣಪ್ಪ NES ಬಡಾವಣೆ ಗಾಂಧಿನಗರ ಮಾಗಡಿ ಟೌನ್-562120, ಬೆಂಗಳೂರು ಗ್ರಾಮಾಂತರ ಜಿಲ್ಲೆ. | ST | 23.05.1971 | 31.03.14 | S.S.L.C. 73.500 | ಜಿಲ್ಲಾ ನೋಂದಣಿ ಕಛೇರಿ, ಬೆಂಗಳೂರು, ಗ್ರಾಮಾಂತರ ಜಿಲ್ಲೆ (ಬೆಂಗಳೂರು ಜಿಲ್ಲಾ ನೇಮಕಾತಿ ಘಟಕ) | ಪರಿಶಿಷ್ಟ ಪಂಗಡ ಸಾಮಾನ್ಯ ಅಭ್ಯರ್ಥಿ ಮುಖ್ಯಪಟ್ಟಿ |

S.S.L.C. ಅಂಕಪಟ್ಟಿಯ ನೋಂದಣಿ ಸಂಖ್ಯೆ: 173450/ March 1986 ದ ಪ್ರಕಾರ ರವಿ ಜಯವಂತ ಕಾಳೆ ಇವರ ಜನ್ಮ ದಿನಾಂಕವು 01.06.1970, S.S.L.C. ಅಂಕಪಟ್ಟಿಯ ನೋಂದಣಿ ಸಂಖ್ಯೆ: 15160/ April 1983 ದ ಪ್ರಕಾರ ಕಲ್ಲಿನಾಥ ಮಾಧವನವರ್ ಇವರ ಜನ್ಮ ದಿನಾಂಕವು 05.05.1968, S.S.L.C. ಅಂಕಪಟ್ಟಿ ನೋಂದಣಿ ಸಂಖ್ಯೆ: 203978/ April 1989 ದ ಪ್ರಕಾರ ಭೀಮಪ್ಪ ದೊಡ್ಡಪ್ಪ ಪಾತ್ರೂಟ ಇವರ ಜನ್ಮ ದಿನಾಂಕವು 01.01.1973, S.S.L.C. ಅಂಕಪಟ್ಟಿ ನೋಂದಣಿ ಸಂಖ್ಯೆ: 146063/ April 1989ದ ಪ್ರಕಾರ ವಾಲೂ ಜೆ. ರಾಠೋಡ್ ಇವರ ಜನ್ಮ ದಿನಾಂಕವು 15.05.1971 ಹಾಗೂ S.S.L.C. ಅಂಕಪಟ್ಟಿ ನೋಂದಣಿ ಸಂಖ್ಯೆ: 344105/March 1988 ದ ಪ್ರಕಾರ ಎಂ. ರಂಗನಾಥ್ ಇವರ ಜನ್ಮ ದಿನಾಂಕವು 23.05.1971 ಆಗಿರುತ್ತದೆ.

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು, ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದುಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನು ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾ ವಿಧಿ) ಬರೆದುಕೊಡತಕ್ಕದ್ದು.

10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್ (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರ್‌ಪಡಿಸತಕ್ಕದ್ದು.
13. ಅಭ್ಯರ್ಥಿಯು ತಮ್ಮ ಜಾತಿ ಜನ್ಮ ದಿನಾಂಕ ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು. ಹಾಗೂ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
15. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS/CCA/ ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ಧನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/- ರೂಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
16. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
17. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
18. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
19. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
20. ಈ ನೇಮಕಾತಿಗಾಗಿ ಅರ್ಜಿಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ನಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ Establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/- ರೂಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-2 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
21. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ನಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

ನೇಮಕಾತಿ ಪ್ರಾಧಿಕಾರಿ ಹಾಗೂ ನೋಂದಣಿ ಮಹಾಪರಿವೀಕ್ಷಕರು ಮತ್ತು,
ಮುದ್ರಾಂಕಗಳ ಆಯುಕ್ತರ ಪರವಾಗಿ ಬೆಂಗಳೂರು.

ಪಿ.ಆರ್.111

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಮಂಡ್ಯ ಉಪವಿಭಾಗ-2, ಮಂಡ್ಯ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ: ಎಫ್‌ಸಿ: 64:2003**

**ಅರ್ಜಿದಾರರು**

1. ಮುನಿಸ್ವಾಮಿ ಬಿನ್ ಜವರಾಯಪ್ಪ
2. ಶ್ರೀಮತಿ ಜಯಮ್ಮ ಕೋಂ ಮುನಿಸ್ವಾಮಿ
3. ಶಂಕರ್ ಬಿನ್ ಮುನಿಸ್ವಾಮಿ
ವಾಸ ಕುಕ್ಕುರು ಗ್ರಾಮ,
ಮಂಚನಹಳ್ಳಿ ಪೋಸ್ಟ್ ದೊಡ್ಡಮಾಲೂರು ಹೋಬಳಿ
ಚನ್ನಪಟ್ಟಣ ತಾ, ಬೆಂಗಳೂರು ಗ್ರಾಮಾಂತರ

**ವಿರುದ್ಧ**

**ಪ್ರತಿವಾದಿಗಳು**

1. ಕೆ. ಆರ್. ರಮೇಶ್
ಲವಕುಶ ನಗರ ಹೊಸೂರು ಮುಖ್ಯ ರಸ್ತೆ ಬೆಂಗಳೂರು.
2. ಬ್ರಾಂಚ್ ಮ್ಯಾನೇಜರ್ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಹೊಸೂರು ಮುಖ್ಯ ರಸ್ತೆ ಮಡಿವಾಳ, ಬೆಂಗಳೂರು.

**ಅಧಿಸೂಚನೆ**

ಅರ್ಜಿದಾರರಾದ ಮುನಿಸ್ವಾಮಿ ಮತ್ತು ಇತರರು ಅವರು ತಮ್ಮ ಗಂಡ: ಮಗನಾದ ಶ್ರೀ ಬಿ. ಎಂ. ಅಂಕಪ್ಪ ಅವರು ಒಂದನೇ ಪ್ರತಿವಾದಿ ಶ್ರೀ: ಕೆ. ಆರ್. ರಮೇಶ್ ರವರ ಬಳಿ ಚಾಲಕ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 15.2.2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿದ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 4.1.2005 ರಂದು ನೀಡಲಾಗಿದೆ.

ಕಾರ್ಮಿಕ ಅಧಿಕಾರಿ, ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ಮಂಡ್ಯ
ಉಪವಿಭಾಗ-2, ಮಂಡ್ಯ-571401.

ಪಿ.ಆರ್.112

## ಅಬಕಾರಿ ಇಲಾಖೆ

## ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ- ಇವರ ನ್ಯಾಯಾಲಯ

### ಪತ್ರಿಕಾ ಪ್ರಕಟಣೆ

ವಾಹನ ಮಾಲೀಕರಿಗೆ/ ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಅಕ್ರಮವಾಗಿ ಮದ್ಯ ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪದ ಮೇರೆಗೆ ಈ ಕೆಳಕಂಡ ವಾಹನಗಳನ್ನು ಅಬ್ಕಾರಿ ಪ್ರಕರಣಗಳಲ್ಲಿ ಜಪ್ತು ಮಾಡಲಾಗಿದೆ.

| ಕ್ರ. ಸಂ. | ಡಿಟಿಸಿಆರ್ ಸಂಖ್ಯೆ | ಮೊಕದ್ದಮೆ ಸಂಖ್ಯೆ ಮತ್ತು ದಿನಾಂಕ | ಮೊಕದ್ದಮೆ ದಾಖಲು ಮಾಡಿದ ಅಧಿಕಾರಿ ಪದನಾಮ | ವಶಪಡಿಸಿಕೊಂಡ ಮದ್ಯ | ವಶಪಡಿಸಿಕೊಂಡ ವಾಹನದ ಸಂಖ್ಯೆ ಮತ್ತು ವಿಧ |
|---|---|---|---|---|---|
| 1 | 2 | 3 | 4 | 5 | 6 |
| 1 | 32/04-05 | 03/04-05<br>04/9-04 | ಅಬಕಾರಿ ಉಪ ನಿರೀಕ್ಷಕರು,<br>ನಾಗಮಂಗಲ ಉಪ ವಲಯ | 8.640 | ಬಜಾಜ್ ಸ್ಕೂಟರ್<br>ಕೆಎ-03/ಕ್ಯೂ-5800 |
| 2 | 66/04-05 | 06/04-05<br>27/10-04 | ಅಬಕಾರಿ ಉಪ ನಿರೀಕ್ಷಕರು,<br>ಮದ್ದೂರು ಉಪ ವಲಯ | 500<br>ಸಾರಾಯಿ | ಮಾರುತಿ ಕಾರ್<br>ಕೆಎ-03/ಎಂಸಿ-194 |
| 3 | 70/04-05 | 9/04-05<br>30/10-04 | ಅಬಕಾರಿ ಉಪ ನಿರೀಕ್ಷಕರು,<br>ಉಪ ವಿಭಾಗ ಮಂಡ್ಯ. | 140<br>ಮದ್ಯಸಾರ | ಅಂಬಾಸಿಡರ್ ಕಾರ್<br>ಎಂವೈವಿ-8792 |
| 4 | 72/04-05 | 08/04-05<br>2/11-04 | ಅಬಕಾರಿ ಉಪ ನಿರೀಕ್ಷಕರು,<br>ಮದ್ದೂರು ಉಪವಲಯ. | 390<br>ನಕಲಿ ಸಾರಾಯಿ | ಟಾಟಾ ಸುಮೋ<br>ಕೆಎ-01/ಎನ್-8727 |
| 5 | 74/04-05 | 03/04-05<br>12/11-04 | ಅಬಕಾರಿ ನಿರೀಕ್ಷಕರು,<br>ಮದ್ದೂರು ವಲಯ | 520<br>ನಕಲಿ ಸಾರಾಯಿ | ಅಂಬಾಸಿಡರ್ ಕಾರ್<br>ಕೆಎ-01/ಬಿ-1354 |
| 6 | 86/04-05 | 12/04-05<br>27/11-04 | ಅಬಕಾರಿ ನಿರೀಕ್ಷಕರು,<br>ಉಪ ವಿಭಾಗ, ಮಂಡ್ಯ | 25 ಸೇಂದಿ | ಟಿವಿಎಸ್-50<br>ಕೆಎ-11/ಇ-6255 |
| 7 | 87/04-05 | 12/04-05<br>27/11-04 | ಅಬಕಾರಿ ಉಪ ನಿರೀಕ್ಷಕರು,<br>ಉಪವಿಭಾಗ, ಮಂಡ್ಯ | 30 ಸೇಂದಿ | ಟಿವಿಎಸ್ ಛಾಂಪ್<br>ಕೆಎ-11/ಇ-5935 |
| 8 | 97/04-05 | 10/04-05<br>14/12-04 | ಅಬಕಾರಿ ಉಪ ನಿರೀಕ್ಷಕರು,<br>ಉಪ ವಲಯ, ಮದ್ದೂರು | 35<br>ಸೇಂದಿ | ಟಿವಿಎಸ್-50<br>ಸಿಎನ್ಎನ್-1917 |
| 9 | 98/04-05 | 04/04-05<br>15/12-04 | ಅಬಕಾರಿ ಉಪ ನಿರೀಕ್ಷಕರು,<br>ನಂ. 4, ಗುಪ್ತ ವಾರ್ತಾ ವಿಭಾಗ,<br>ಮೈಸೂರು | 50 ಸೇಂದಿ | ಬಜಾಜ್ ಸ್ಕೂಟರ್<br>ಕೆಎ-02/ಸಿ-8279 |
| 10 | 101/04-05 | 11/04-05<br>16/12-04 | ಅಬಕಾರಿ ಉಪ ನಿರೀಕ್ಷಕರು,<br>ಮದ್ದೂರು ಉಪ ವಲಯ | 40 ಸೇಂದಿ | ಟಿವಿಎಸ್ ಛಾಂಪ್<br>ಕೆಎ-04/1351 |

ಮೇಲ್ಕಂಡ ವಾಹನಗಳು ಜಪ್ತಾಗಿ ಸುಮಾರು ಒಂದು ತಿಂಗಳಿನಿಂದ (7) ತಿಂಗಳು ಕಳೆದರೂ ಯಾರೊಬ್ಬರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನ ಮತ್ತು ಮದ್ಯ/ಸಾರಾಯಿ ತಮ್ಮದೆಂದು, ಮಾಲೀಕತ್ವ ನಿರೂಪಿಸಲು ಈವರೆವಿಗೂ ಬಂದಿರುವುದಿಲ್ಲ. ಆದ್ದರಿಂದ, ವಾಹನಗಳು ಯಾರಿಗೆ ಸೇರಿದೆಯೋ ಅಂತಹ ಮಾಲೀಕತ್ವವುಳ್ಳವರು ದಾಖಲಾತಿಗಳೊಡನೆ ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳ ಮುಂದೆ ಹಾಜರಾಗಿ ಈ ಪ್ರಕಟಣೆಯಾದ ದಿನಾಂಕದಿಂದ ಅಥವಾ ಕರ್ನಾಟಕ ರಾಜ್ಯಪತ್ರದ ಪ್ರಕಟಣೆ/ ದಿನಪತ್ರಿಕೆಯಲ್ಲಿ ಪ್ರಕಟಿಸಿದ ದಿನಾಂಕ (ಯಾವುದು ಮೊದಲೊ) ಆ ದಿನಾಂಕದಿಂದ ಹದಿನೈದು (7) ದಿನಗಳ ಒಳಗೆ ಸಾಬೀತುಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಸಂಬಂಧಪಟ್ಟವರು ಹಕ್ಕನ್ನು ಚಲಾಯಿಸದಿದ್ದಲ್ಲಿ ಮೇಲ್ಕಂಡ ವಾಹನಗಳನ್ನು ಮತ್ತು ಮುದ್ದೆ ಮಾಲನ್ನು ಕರ್ನಾಟಕ ಅಬ್ಕಾರಿ ಕಾಯಿದೆ 1965ರ ಕಲಂ 43(ಎ) ಮತ್ತು 43(ಸಿ)ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ತಡವಾಗಿ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಈ ಪತ್ರಿಕಾ ಪ್ರಕಟಣೆಯನ್ನು ದಿನಾಂಕ: 4.1.05 ರಂದು ನನ್ನ ಸಹಿ ಮತ್ತು ಮೊಹರು ಹಾಕಿ ನೀಡಲಾಗಿದೆ.

ಅಬಕಾರಿ ಅಧೀಕ್ಷಕರು, ಹಾಗೂ ಅಧಿಕೃತ ಅಧಿಕಾರಿಗಳು,
ಮಂಡ್ಯ ಜಿಲ್ಲೆ ಮಂಡ್ಯ.

ಪಿ.ಆರ್.113

## ಮುಖ್ಯ ಕಾರ್ಯನಿರ್ವಹಣಾಧಿಕಾರಿ ಉಡುಪಿ ಜಿಲ್ಲಾ ಪಂಚಾಯತ್ ಉಡುಪಿ

### ಅಧಿಸೂಚನೆ ಸಂಖ್ಯೆ: ಜಿಪಂಉ: ಕೌನ್ಸಿಲ್:ಗ್ರಾಪಂ:90:04-05 ದಿನಾಂಕ: 12ನೇ ಜನವರಿ 2005

**ವಿಷಯ :** ಕುಂಜಾಲು ಗ್ರಾಮ ಪಂಚಾಯತಿಯಲ್ಲಿ ಪಂಚಾಯತ್ ಸಾಮಾನ್ಯ ಸಭೆಗಳು ನಡೆಯದಿರುವುದರಿಂದ ಗ್ರಾಮ ಪಂಚಾಯತ್ ಬರ್ಕಾಸ್ತುಗೊಳಿಸುವ ಬಗ್ಗೆ.

**ಉಲ್ಲೇಖ :**
1. ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993 ಪ್ರಕರಣ 268 ರಂತೆ.
2. ತಾಲ್ಲೂಕು ಪಂಚಾಯತ್ ಸಾಮಾನ್ಯ ಸಭೆ ದಿನಾಂಕ: 31.8.2004ರ ಶಿಫಾರಸ್ಸು.
3. ದಿನಾಂಕ: 27.11.2004 ರಂದು ನಡೆದ ಜಿಲ್ಲಾ ಪಂಚಾಯತ್ ಸಾಮಾನ್ಯ ಸಭೆಯ ನಿರ್ಣಯದಂತೆ.

ಉಡುಪಿ ತಾಲ್ಲೂಕು ಕುಂಜಾಲು ಗ್ರಾಮ ಪಂಚಾಯತಿನಲ್ಲಿ ದಿನಾಂಕ: 5.12.2003 ರಿಂದ ಗ್ರಾಮ ಪಂಚಾಯತಿಯ ಒಟ್ಟು 18 ಸದಸ್ಯರಲ್ಲಿ, 11 ಸದಸ್ಯರು ಸತತವಾಗಿ ಗೈರು ಹಾಜರಾದ ಕಾರಣ ಕೋರಂ ಅಭಾವದಿಂದ ಗ್ರಾಮ ಪಂಚಾಯತಿಯ ಸಾಮಾನ್ಯ ಸಭೆಯು ನಡೆಯದೆ ಅಭಿವೃದ್ಧಿ ಕಾರ್ಯಗಳು ಸ್ಥಗಿತ ಆಗಿರುವುದೆಂದು, ಇದರಿಂದಾಗಿ, ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮದಂತೆ, ಗ್ರಾಮ ಪಂಚಾಯತಿಯ ನಿರ್ವಹಣೆ ಸಾಧ್ಯ

ಆಗದೆ ಇರುವ ಕಾರಣ, ಸದ್ರಿ ಗ್ರಾಮ ಪಂಚಾಯತನ್ನು ಬರ್ಕಾಸ್ತುಗೊಳಿಸುವಂತೆ ತಾಲ್ಲೂಕು ಪಂಚಾಯತಿಯು ದಿನಾಂಕ: 31.8.2004ರ ಸಾಮಾನ್ಯ ಸಭೆಯಲ್ಲಿ ತೀರ್ಮಾನಿಸಿ ಜಿಲ್ಲಾ ಪಂಚಾಯತಿಗೆ ಶಿಫಾರಸ್ಸು ಮಾಡಲಾಗಿರುವುದರಿಂದ,

ಜಿಲ್ಲಾ ಪಂಚಾಯತಿಯು ದಿನಾಂಕ: 27.11.2004ರ ಸಾಮಾನ್ಯ ಸಭೆಯ ವಿಷಯ ಸಂಖ್ಯೆ: 4ರಲ್ಲಿ ಸದ್ರಿ ಗ್ರಾಮ ಪಂಚಾಯತಿಯಲ್ಲಿ ಕೋರಂ ಇಲ್ಲದೆ ಸಭೆ ನಡೆಯದೆ ಇರುವ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಿ, ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 52 ರಂತೆ ಗ್ರಾಮ ಪಂಚಾಯತಿಯಲ್ಲಿ ಪ್ರತಿ ತಿಂಗಳು ಒಂದು ಸಾಮಾನ್ಯ ಸಭೆ ನಡೆಸುವುದು ಕಡ್ಡಾಯ ಆಗಿರುವುದನ್ನು ಮನಗಂಡು ಸದ್ರಿ ಗ್ರಾಮ ಪಂಚಾಯತಿಯು ದಿನಾಂಕ: 5.12.2003 ರಿಂದ ಒಂದು ಸಾಮಾನ್ಯ ಸಭೆಯನ್ನು ನಡೆಸದೆ ಇರುವುದರಿಂದ ಗ್ರಾಮ ಪಂಚಾಯತಿಯ ಅಧಿನಿಯಮದಡಿ ವಿಧಿಸಿದ ಕರ್ತವ್ಯವನ್ನು ನೆರವೇರಿಸುವಲ್ಲಿ ಸತತವಾಗಿ ತಪ್ಪಿರುವುದೆಂದು ಅಭಿಪ್ರಾಯಕ್ಕೆ ಬಂದು, ಸದ್ರಿ ಅಧಿನಿಯಮದ ಪ್ರಕರಣ 268 ರಂತೆ ಗ್ರಾಮ ಪಂಚಾಯತನ್ನು ವಿಸರ್ಜನೆಗೊಳಿಸಲು ತೀರ್ಮಾನಿಸಿರುತ್ತದೆ. ಸದರಿ ನಿರ್ಣಯದ ಬಗ್ಗೆ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಪಂಚಾಯತ್‌ರಾಜ್ ಅಧಿನಿಯಮದಲ್ಲಿರುವ ನಿಯಮಗಳನ್ನು ಅನುಸರಿಸಿ ಗ್ರಾಮ ಪಂಚಾಯತನ್ನು ವಿಸರ್ಜನೆಗೊಳಿಸುವ ಪ್ರಕಾರ್ಯವನ್ನು ಕೈಗೊಳ್ಳಲು ಸೂಚಿಸಲಾಗಿರುವುದರಿಂದ,

ಜಿಲ್ಲಾ ಪಂಚಾಯತಿಯ ದಿನಾಂಕ: 27.11.2004ರ ಸಾಮಾನ್ಯ ಸಭೆಯ ತೀರ್ಮಾನವನ್ನು ಅನುಸರಿಸಿ ಈ ಕಛೇರಿಯ ನೋಟೀಸ್ ಸಂಖ್ಯೆ: ಉಜಿಪ:ಕೌ:ಗ್ರಾಪಂ:90:04-05 ದಿನಾಂಕ: 10.12.2004 ರಂದು ಕುಂಜಾಲು ಗ್ರಾಮ ಪಂಚಾಯತಿಯ ಪರವಾಗಿ ಗ್ರಾಮ ಪಂಚಾಯತಿಯ ಅಧ್ಯಕ್ಷರಿಗೆ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 268ರಡಿಯಲ್ಲಿ ಸದ್ರಿ ಗ್ರಾಮ ಪಂಚಾಯತನ್ನು ಏಕೆ ವಿಸರ್ಜನೆಗೊಳಿಸಬಾರದು ಎನ್ನುವ ಬಗ್ಗೆ ತಮ್ಮ ಆಕ್ಷೇಪಣೆಯನ್ನು ಸಲ್ಲಿಸಲು 15 ದಿನಗಳ ಕಾಲಾವಕಾಶ ನೀಡಿ ನೋಟೀಸ್ ಜಾರಿ ಮಾಡಲಾಗಿರುತ್ತದೆ. ಸದ್ರಿ ನೋಟೀಸಿನ ಆಧಾರದ ಮೇಲೆ ಗ್ರಾಮ ಪಂಚಾಯತಿಯ ಅಧ್ಯಕ್ಷರು ಕೂಡಲೇ ಗ್ರಾಮ ಪಂಚಾಯತಿಯ ಸಭೆಯನ್ನು ಕರೆದು ಇದರಲ್ಲಿ ವಿಷಯವನ್ನು ಮಂಡಿಸಿ, ತೀರ್ಮಾನವನ್ನು ತೆಗೆದುಕೊಂಡು ಈ ಕಛೇರಿಗೆ ಉತ್ತರವನ್ನು ಸಲ್ಲಿಸಬೇಕಾಗಿರುತ್ತದೆ. ಈ ಪ್ರಕಾರ್ಯವನ್ನು ಮಾಡಲು ಗ್ರಾಮ ಪಂಚಾಯತ್ ಅಧಿನಿಯಮದಂತೆ ಗರಿಷ್ಠ 7 ದಿನಗಳ ಕಾಲಾವಕಾಶ ಸಾಕಾಗುತ್ತದೆ. ಆದರೆ ಸದ್ರಿ ಅಧ್ಯಕ್ಷರು ಈ ಕಛೇರಿಯ ನೋಟೀಸಿಗೆ ಉತ್ತರ ನೀಡಲು ಒಂದು ತಿಂಗಳ ಕಾಲಾವಕಾಶ ನೀಡಬೇಕೆಂದು ದಿನಾಂಕ: 30.12.2004ರ ತಮ್ಮ ಪತ್ರದಲ್ಲಿ ಈ ಕಛೇರಿಗೆ ತಿಳಿಸಿರುತ್ತಾರೆ. ಗ್ರಾಮ ಪಂಚಾಯತಿಯ ಅಧ್ಯಕ್ಷರು ಯಾವುದೇ ಸಕಾರಣವನ್ನು ನೀಡದೇ ಕೇವಲ ಸಮಯವನ್ನು ಮುಂದೂಡಲು ಪ್ರಯತ್ನಪಟ್ಟಿರುವುದು ಕಂಡು ಬರುತ್ತಿರುವುದರಿಂದ ಅವರ ವಿವರಣೆಯನ್ನು ಒಪ್ಪಲು ಬರುವುದಿಲ್ಲ. ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 268ರಂತೆ ಗ್ರಾಮ ಪಂಚಾಯತಿಗೆ ವಿಸರ್ಜನೆ ಮಾಡುವ ಬಗ್ಗೆ ಸಾಕಷ್ಟು ಅವಕಾಶವನ್ನು ನೀಡಲಾಗಿರುವುದರಿಂದ,

ಮೇಲೆ ವಿವರಿಸಿದ ಕಾರಣಗಳಿಗಾಗಿ, ಉಡುಪಿ ಜಿಲ್ಲೆ ಉಡುಪಿ ತಾಲ್ಲೂಕಿನ ಕುಂಜಾಲು ಗ್ರಾಮ ಪಂಚಾಯತಿಯು ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರಡಿಯಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನಡಿಯಲ್ಲಿ ಅದಕ್ಕೆ ವಿಧಿಸಿದ ಕರ್ತವ್ಯವನ್ನು ನೆರವೇರಿಸಲು ಸಕ್ಷಮವಾಗಿಲ್ಲದೆ ಇರುವುದರಿಂದ ಹಾಗೂ ನೆರವೇರಿಸುವಲ್ಲಿ ಸತತವಾಗಿ ತಪ್ಪಿರುವುದರಿಂದ, ಜಿಲ್ಲಾ ಪಂಚಾಯತಿಯ ದಿನಾಂಕ: 27.11.2004ರ ಸಾಮಾನ್ಯ ಸಭೆಯ ವಿಷಯ ಸಂಖ್ಯೆ: 4ರಲ್ಲಿ ತೀರ್ಮಾನಿಸಿದಂತೆ, ಸದ್ರಿ ಗ್ರಾಮ ಪಂಚಾಯತನ್ನು ರಾಜ್ಯ ಪತ್ರದಲ್ಲಿ ಈ ಅಧಿಸೂಚನೆ ಪ್ರಕಟ ಆದ ದಿನಾಂಕದಿಂದ ಜಾರಿಗೆ ಬರುವಂತೆ ವಿಸರ್ಜನೆಗೊಳಿಸಿ ಆದೇಶಿಸಲಾಗಿದೆ.

ಪಿ.ಡಿ.1 ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಉಡುಪಿ ಜಿಲ್ಲಾ ಪಂಚಾಯತ್ ಉಡುಪಿ.

**KARNATAKA POWER TRANSMISSION CORPORATION LIMITED**
**Office of the Executive Engineer (Elec.) M. W. Divn., KPTCL, Vidyut Nagar, Karwar Road, Hubli-580 024.**
**No. 605/EEE/MWD/HBL/5658-61 Dated: 3rd November 2004**
**NOTIFICATION**

Karnataka Power Transmission Corporation Limited has formulated Scheme under section 28 and clause (e) of the act 18 of the Electricity Supply Act 1948 and the scheme is hereby published in pursuance of section 29(2) of the said Act. This notification is issued for the information of the concerned person. Particulars of the Scheme are as here under.

| | | |
|---|---|---|
| **Name of the work** | : | Proposed 110kv S/C Line on D/C towers from wind Power station Hirevaddatti to Existing 110 kv S/S Dambal at a distance of 9.340 km using Lynx ACSR Conductor in Mundargi Taluk, Gadag District. |
| **Salient Features** | : | For improving the voltage condition in around Hirevaddatti, Narayanapura and Dambal area in Gadag district to meet the future load growth in the area. |
| **Areas Passing Through** | : | Village limits of Dambal, Narayanapura and Hirevaddatti |
| **Approximate Cost** | : | Rs. 126.00 Lakhs |

KPTCL Shall have and exercise all Power which the Telegraphic authorities possess under part III of the Telegraphic act 1985 (18 of 1985) for implementation of the above said scheme. Any objections regarding the above scheme shall be sent to the Executive Engineer (Elec), Major Works Division, KPTCL, Hubli within two months from the date of publication of this notification for KPTCL pursuance.

PD-2 Executive Engineer (Elec)., M.W. Divn, KPTCL, Hubli

**KARNATAKA POWER TRANSMISSION CORPORATION LIMITED**
**Office of the Executive Engineer (Elec.) Major Works Division, KPTCL, N.R. Mohalla Mysore-7.**
**No. EEE/MWD/MYS/2004-05/3894-98 Dated: 1st December 04**
**DRAFT NOTIFICATION**

Karnataka Power Transmission Corporation Limited has formulated a Scheme under section 28 and clause (e) of Section18 of the Electricity Supply Act 1948 and the scheme is herewith published in

pursuance of section 29(2) of the said Act. This notification is issued for information of the license holders and any other concerned persons Particulars of the Scheme are as here under.

| | | |
|---|---|---|
| **Name of the work** | : | Construction of 66KV DC Transmission line from the proposed MHS of M/s. Atria Brindavan Power Ltd., at KRS, North Bank to the existing 66/11 KV S/S at Pandavapura. |
| **Salient Features and** | : | For evacuation of 12 MW Power improvement of voltage & to meet further load growth in and around Pandavapura Taluk. |
| **Areas Passing through** | : | Village Limits of Chikkayanahalli, Katteri, Haganahalli, Malenahalli, Aralaguppe, Syandanahalli, K. Bettahalli, Shambunahalli, Harohalli, Pandavapura. |
| **Approximate length of the line** | : | 15.620 Kms. |
| **Approximate Cost** | : | 297.00 Lakhs. |

KPTCL Shall have and exercise all Power which the Telegraphic authorities possess under part III of the Telegraphic act 1985 (13 of 1985) for implementation of the above said scheme. Any objections regarding the above scheme shall be sent to the Executive Engineer (Elec), Major Works Division, KPTCL, Mysore-7 within two months from the date of publication of this notification for KPTCLs, pursuance.

PD-3 Executive Engineer (Elec)., M.W. Divn, KPTCLs, Mysore

**ಕರ್ನಾಟಕ ವಿದ್ಯುತ್ ಪ್ರಸರಣಾ ನಿಗಮ ನಿಯಮಿತ**

**ಪ್ರಕಟಣೆ ಸಂಖ್ಯೆ: ಎಇಇ (ಕ)/ಟಿ-141/3915-17 ದಿನಾಂಕ: 3ನೇ ಡಿಸೆಂಬರ್ 2004**

ವಿದ್ಯುತ್ ಪೂರೈಕೆ ಅಧಿನಿಯಮ 1948, ಸೆಕ್ಷನ್ 28, ಮತ್ತು 18ರ ಅನುಸಾರವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಒಂದು ಯೋಜನೆಯನ್ನು ರೂಪಿಸಿದೆ. ಈ ಯೋಜನೆಯನ್ನು ಅದೇ ಅಧಿನಿಯಮದ ಸೆಕ್ಷನ್ 29(2)ಕ್ಕೆ ಅನುಸಾರವಾಗಿ ಇಲ್ಲಿ ಪ್ರಕಟಿಸಲಾಗಿದೆ. ಈ ಪ್ರಕಟಣೆಯನ್ನು ಲೈಸೆನ್ಸ್ ಹೊಂದಿರುವವರು ಮತ್ತು ಇನ್ನಿತರ ಯಾವುದೇ ಸಂಬಂಧಿಸಿದ ವ್ಯಕ್ತಿಗಳ ಮಾಹಿತಿಗಾಗಿ ನೀಡಲಾಗಿದೆ. ಯೋಜನೆಯ ವಿವರಗಳು ಕೆಳಕಂಡಂತಿವೆ.

| | | |
|---|---|---|
| **ಕೆಲಸದ ಹೆಸರು** | : | 66 ಕೆ. ವಿ. ಹಾಸನ-ಹೊಳೆನರಸೀಪುರ-ಕಿಕ್ಕೇರಿ ವಿದ್ಯುತ್ ಮಾರ್ಗದಿಂದ ಸಂಪರ್ಕ ಜೋಡಣೆ ಮಾಡಿ ಅಗ್ರಹಾರದ ಹತ್ತಿರ ಉದ್ದೇಶಿತ ಹಾಸನ ಜಿಲ್ಲೆ, ಹೊಳೆನರಸೀಪುರ ತಾಲ್ಲೂಕು ಹರಿಹರಪುರ 66/11 ಕೆ.ವಿ. ವಿದ್ಯುತ್ ವಿತರಣಾ ಕೇಂದ್ರದ ನಿರ್ಮಾಣದ ಸಲುವಾಗಿ ವಿದ್ಯುತ್ ಮಾರ್ಗ ನಿರ್ಮಾಣ. |
| **ಉದ್ದೇಶ** | : | ಹಾಸನ ಜಿಲ್ಲೆಯ, ಹೊಳೆನರಸೀಪುರ ತಾಲ್ಲೂಕು, ಹರಿಹರಪುರ ಹಾಗೂ ಸುತ್ತಮುತ್ತಲ ಪ್ರದೇಶದ ವೋಲ್ಟೇಜ್ ಸ್ಥಿತಿ ಉತ್ತಮಪಡಿಸಿ ಸ್ಥಿರವಾದ ವಿದ್ಯುತ್ ಪೂರೈಸಲು ಮತ್ತು ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸುವ ಸಲುವಾಗಿ. |
| **ಹಾದು ಹೋಗುವ ಪ್ರದೇಶ** | : | ಹಡವನಹಳ್ಳಿ, ಬೈಚೇನಹಳ್ಳಿ, ಕಾಲನಹಳ್ಳಿ ಕಾವಲು, ಬೈರೇನಹಳ್ಳಿ, ಹರಿಹರಪುರ. |
| **ಅಂದಾಜು ವೆಚ್ಚ** | : | ರೂ. 66.00 ಲಕ್ಷ |

ಮೇಲಿನ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಭಾರತೀಯ ಟೆಲಿಗ್ರಾಫ್ ಅಧಿನಿಯಮ 1985 (13)ರಲ್ಲಿ ಉಪಲಭ್ಯವಾಗಿರುವ ಎಲ್ಲಾ ಅಧಿಕಾರವನ್ನು ಕವಿಪ್ರನಿನಿ ಹೊಂದಿರುವುದು, ಮತ್ತು ಅಧಿಕಾರವನ್ನು ಕವಿಪ್ರನಿನಿ ಚಲಾಯಿಸುವುದು. ಈ ಯೋಜನೆಯ ಬಗೆಗೆ ಏನಾದರೂ ಆಕ್ಷೇಪಣೆಗಳು ಇದ್ದಲ್ಲಿ ಅದನ್ನು ಈ ಪ್ರಕಟಣೆಯ ದಿನಾಂಕದಿಂದ ಎರಡು ತಿಂಗಳೊಳಗಾಗಿ ಕಾರ್ಯಪಾಲಕ ಇಂಜಿನಿಯರ್ (ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಹಾಸನ ಇವರಿಗೆ ಸಲ್ಲಿಸಬೇಕಾಗಿ ವಿನಂತಿ.

ಕಾರ್ಯನಿರ್ವಾಹಕ ಇಂಜಿನಿಯರ್ (ವಿ),

ಪಿ.ಡಿ.4 ಬೃಕಾವಿ/ಕವಿಪ್ರನಿನಿ/ ಹಾಸನ.

**KARNATAKA STATE BAR COUNCIL**

**Old K.G.I.D Building, Dr. Ambedkar Veedhi, Bangalore-560 001**

**No. KSBC/ Dated: 11th January 2005**

**NOTIFICATION**

Amendment to Rule made by the Karnataka State Election Rules, Bar Council U/sec. 15(2)(c)(d) of the Advocates Act, 1961.

Rule 8:

(i) ............................

(ii) Every nomination paper shall be accompanied by Cash Receipt/ Demand Draft for having paid a fee of Rs. 10,000/- and in case of candidate belonging to S.C./S.T. Rs. 7,500/- which will be refunded in case the candidate succeeds in the election or withdraws his candidature before the due date.

(Karnataka State Bar Council Resolution No. 111/2004 dated: 5.9.2004 and the same is approved by Bar Council of India in its meeting dated 5.9.2004 vide letter dated 15.09.2004).

**M. P. JAKATY**

PD-5 Secretary.

ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಉ.ಕ. ಜಿಲ್ಲೆ, ಕಾರವಾರ ರವರ ನ್ಯಾಯಾಲಯದಲ್ಲಿ

ನಂ. ಇಎಕ್ಸ್‌ಇ:5:ಜಪ್ತಿ:ಯಲ್ಲಾಪುರ:25:1987-88 ದಿನಾಂಕ: 7ನೇ ಜನವರಿ 2005

**ಉಪಸ್ಥಿತರು :** ಶ್ರೀ ಎಸ್. ಎಸ್. ವಡಕಣ್ಣವರ, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದುದಾರರು :** ಶ್ರೀ ಎ. ಎಸ್. ಪಿಸೆ ಪಿ.ಎಸ್.ಐ. ಯಲ್ಲಾಪುರ ಪೊಲೀಸ್ ಠಾಣೆ.
(ಮಾನ್ಯ ಸಹಾಯಕ ಅಭಿಯೋಜಕ ನಿರ್ದೇಶಕರು, ಕಾರವಾರ ರವರು ಪ್ರತಿನಿಧಿಸಿರುತ್ತಾರೆ).

**ವಿರುದ್ಧ**

**ಅರ್ಜಿದಾರರು :** ಶ್ರೀ ಜುವಾಂವ್ ಪಾವ್ಲ ಡಿಕೊಸ್ತಾ ವಾಸ: ಸಾಲಸೆಟ್ ಗೋವಾ ಇವರ ಜಿ.ಪಿ.ಎ. ಧಾರಕರಾದ ಶ್ರೀ ಪ್ರಕಾಶ ತುಕಾರಾಮ ಚಂದ್ರೇಕರ ಸಾ: ಪೊಳೆಂ, ಕಾಣಕೋಣ, ಗೋವಾ.
(ಶ್ರೀ ಆರ್. ವಿ. ನಾಯ್ಕ, ವಕೀಲರು, ಕಾರವಾರ ಇವರು ಪ್ರತಿನಿಧಿಸಿರುತ್ತಾರೆ).

**ತೀರ್ಪು**

**ಪ್ರಸ್ತಾವನೆ:**

1. ಈ ಪ್ರಕರಣದ ಫಿರ್ಯಾದುದಾರರು ತಮಗೆ ದೊರೆತ ಸುದ್ದಿಯ ಮೇರೆಗೆ ದಿನಾಂಕ: 20.12.1987 ರಂದು ತಮ್ಮ ಸಿಬ್ಬಂದಿ ಮತ್ತು ಪಂಚ ಜನರೊಂದಿಗೆ ಯಲ್ಲಾಪುರ-ಹುಬ್ಬಳ್ಳಿ ರಸ್ತೆಯ ತೆಂಗಿನಕೇರಿ ಕತ್ರಿಯ ಹತ್ತಿರ ನಿಂತು ಕಾಯುತ್ತಿದ್ದಾಗ ಬೆಳಿಗ್ಗೆ ಸುಮಾರು 10-45 ಕ್ಕೆ ಕಿರವತ್ತಿಯ ಕಡೆಯಿಂದ ಜಿಡಿಇ-2087ನೇ ನಂಬರಿನ ಕಾರು ವೇಗವಾಗಿ ಬರುತ್ತಿದ್ದುದನ್ನು ನೋಡಿ ನಿಲ್ಲಿಸಲು ಕೈ ಸನ್ನೆ ಮಾಡಿ, ಸೀಟಿ ಬಾರಿಸಿದರೂ ಸಹ ನಿಲ್ಲಿಸದೇ ಇದ್ದ ಪ್ರಯುಕ್ತ ತಮ್ಮ ಜೀಪಿನ ಸಹಾಯದಿಂದ ಹಿಂಬಾಲಿಸಿಕೊಂಡು ಹೋಗುತ್ತಿರುವಾಗ ಸದರಿ ಕಾರಿನ ಚಾಲಕನು ಫಾರೆಸ್ಟ್ ನಾಕಾದ ಗೇಟಿಗೆ ಡಿಕ್ಕಿ ಹೊಡೆದು ಮುಂದಿನ ಗ್ಲಾಸ್ ಒಡೆದರೂ ಸಹ ನಿಲ್ಲಿಸದೇ ಮುಂದೆ ಹೋಗಿರುವುದಾಗಿಯೂ, ಮುಂದೆ ಬಾಳೆಗುಳಿ ಕತ್ರಿಯ ತನಕ ತಾವು ಹಿಂಬಾಲಿಸಿದಾಗ ತಮ್ಮ ಸುದ್ದಿಯ ಮೇರೆಗೆ ಅಂಕೋಲಾ ಪೊಲೀಸ್ ಉಪ ನಿರೀಕ್ಷಕರವರು ಅಲ್ಲಲ್ಲಿ ಫಾರೆಸ್ಟ್‌ನಾಕಾದ ಗೇಟು ಹಾಕಿದ್ದು, ತಮ್ಮ ಸಿಬ್ಬಂದಿಯೊಂದಿಗೆ ಕಾಯುತ್ತಿರುವುದನ್ನು ನೋಡಿ, ಬಾಳೆಗುಳಿ ಕತ್ರಿಯಿಂದ ಸುಮಾರು 3-4 ಕಿ.ಮೀ. ನಷ್ಟು ದೂರ ಕಾರನ್ನು ಹಿಂತಿರುಗಿಸಿ ತಂದು ಹಿಂಬದಿಯಿಂದ ತಾವು ಬರುತ್ತಿದ್ದುದರಿಂದ ಕಾರನ್ನು ರಸ್ತೆ ಬದಿಗೆ ನಿಲ್ಲಿಸಿ, ಕಾರಿನಲ್ಲಿದ್ದ ಚಾಲಕ ಮತ್ತು ಇನ್ನೊಬ್ಬ ಇಸಮನು ಅಡವಿಯಲ್ಲಿ ಓಡಿ ಹೋದರೆಂತಲೂ ಮತ್ತು ಅವರನ್ನು ಹಿಡಿಯಲು ನಡೆಸಿದ ಪ್ರಯತ್ನ ಸಫಲವಾಗಲಿಲ್ಲವೆಂತಲೂ, ಅಲ್ಲದೇ ಸದರಿ ವ್ಯಕ್ತಿಗಳ ಮುಖಪರಿಚಯ ತಿಳಿಯಲಿಲ್ಲವೆಂತಲೂ, ನಂತರ ಕಾರನ್ನು ಪರಿಶೀಲಿಸಿ ನೋಡಲಾಗಿ, ಕಾರಿನ ಡಿಕ್ಕಿಯಲ್ಲಿ 6 ಗೋಣಿ ಚೀಲಗಳ ಮೂಟೆಗಳು ಮತ್ತು ಕಾರಿನ ಹಿಂದಿನ ಸೀಟಿನಲ್ಲಿ 5 ಗೋಣಿ ಚೀಲದ ಮೂಟೆಗಳು, ಅಲ್ಲದೇ ಕಾರಿನ ಮುಂದಿನ ಸೀಟಿನಲ್ಲಿ ಎಡಬದಿಗೆ ಒಂದು ಗೋಣಿ ಚೀಲದ ಮೂಟೆ ಇದ್ದು, ಸದರಿ ಮೂಟೆಗಳನ್ನು ಹೊರಗೆ ತೆಗೆದು ಬಿಚ್ಚಿ ನೋಡಲಾಗಿ, ಪ್ರತಿಯೊಂದು ಮೂಟೆಯಲ್ಲಿ ಒಣ ಹುಲ್ಲು ಹಾಕಿ, ಮೂಟೆಗೆ 24 ರಂತೆ ಒಟ್ಟು 288 750 ಮಿ.ಲೀ.ನ ಸೊನಾ ಕೊಕೊನಟ್ ಫೆನ್ನಿ ಎಂಬ ಲೇಬಲಿನ ಬಾಟ್ಲಿಗಳು ದೊರೆತಿದ್ದು, ಪ್ರತಿಯೊಂದು ಮೂಟೆಯಿಂದ ಒಂದೊಂದು ಬಾಟ್ಲಿಯಂತೆ ಒಟ್ಟು 12 ಬಾಟ್ಲಿಗಳನ್ನು ತೆಗೆದಿರಿಸಿ, ಪಂಚನಾಮೆಯಂತೆ ಕಾರು ಮತ್ತು ಮೂಟೆಗಳನ್ನು ಜಪ್ತು ಮಾಡಿ, ಪ್ರಕರಣವನ್ನು ತಮ್ಮ ಠಾಣಾ ಗುನ್ಹೆ ನಂ. 163/1987 ದಿನಾಂಕ: 20.12.1987ರ ಪ್ರಕಾರ ದಾಖಲು ಮಾಡಿರುವುದಾಗಿ ತಿಳಿಸಿ, ಜಪ್ತು ಮಾಡಿದ ಸ್ವತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವಿನಂತಿಸಿ, ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

2. ಸದರಿ ವರದಿಯನ್ನನುಸರಿಸಿ ಈ ಪ್ರಾಧಿಕಾರವು ದಿನಾಂಕ: 22.04.1988 ರಂದು ಡೆಕ್ಕಾನ್ ಹೆರಾಲ್ಡ್ ದಿನ ಪತ್ರಿಕೆಯಲ್ಲಿ ಒಂದು ಪ್ರಕಟಣೆಯನ್ನು ಹೊರಡಿಸಿ, ಜಪ್ತಾದ ಸ್ವತ್ತುಗಳು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತವುಗಳಾಗಿದ್ದು, ಆ ರೀತಿ ಮುಟ್ಟುಗೋಲು ಹಾಕಿಕೊಳ್ಳಲು ಯಾರಾದರೂ ತಕರಾರುಗಳನ್ನು ಹೊಂದಿದ್ದಲ್ಲಿ ತಮ್ಮ ತಕರಾರುಗಳನ್ನು ಪ್ರಕಟಣೆ ಹೊರಡಿಸಲಾದ ದಿನಾಂಕದಿಂದ ಒಂದು ವಾರದೊಳಗಾಗಿ ಲಿಖಿತ ತಕರಾರುಗಳನ್ನು ಸಲ್ಲಿಸಲು ಸೂಚಿಸಲಾಗಿತ್ತು. ಆದರೆ ಯಾರಿಂದಲೂ ತಕರಾರುಗಳು ಸ್ವೀಕೃತವಾಗಿರಲಿಲ್ಲ, ಅಲ್ಲದೇ ಯಲ್ಲಾಪುರ ಪೊಲೀಸ್ ಠಾಣೆಯ ಪೊಲೀಸ್ ಉಪ ನಿರೀಕ್ಷಕರು ಸಹ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿ, ಸದರಿ ಪ್ರಕರಣದ ಆರೋಪಿಗಳು ಪತ್ತೆಯಾಗಿಲ್ಲವೆಂದು ತಿಳಿಸಿದ್ದರಿಂದ ಈ ಪ್ರಕರಣದಲ್ಲಿ ಜಪ್ತಾದ ಎಲ್ಲಾ ಸ್ವತ್ತುಗಳನ್ನು ಸಂಖ್ಯೆ: ಇಎಕ್ಸ್‌ಇ/5/ಜಪ್ತಿ/ಯಲ್ಲಾಪುರ/25/1987-88, ದಿನಾಂಕ: 9.06.1988 ರಂತೆ ಅಬಕಾರಿ ಕಾಯ್ದೆಯ ಕಲಂ 43 ಸಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಈ ಪ್ರಾಧಿಕಾರದಿಂದ ಆದೇಶಿಸಲಾಗಿರುತ್ತದೆ. ಆ ನಂತರ ಸದರಿ ವಾಹನವನ್ನು ದಿನಾಂಕ: 12.06.1989 ರಂದು ಬಹಿರಂಗ ಹರಾಜಿನ ಮೂಲಕ ಅತೀ ಹೆಚ್ಚಿನ ಸವಾಲು ರೂ. 7,300/- (ಏಳು ಸಾವಿರದ ಮೂರು ನೂರು) ಮಾತ್ರಗಳಿಗೆ ಶ್ರೀ ವಿಲಿಯಂ ಸಿಲ್ವಾ, ಕಾರವಾರ ಇವರಿಗೆ ನೀಡಲಾಗಿರುತ್ತದೆ.

3. ಈ ಕ್ರಮವನ್ನು ಪ್ರಶ್ನಿಸಿ ಶ್ರೀ ಜುವಾಂವ್ ಪೌಲ್ ಡಿಕೋಸ್ಟಾ ವಾಸ: ಮನೆ ನಂ. 98, ರಾಸೀಮ ಲಾವತೊಲಿಮ, ಸಾಲ್ಸೆಟ್, ಗೋವಾ ಇವರ ಜಿ.ಪಿ.ಎ. ಧಾರಕರಾದ ಪ್ರಕಾಶ ತುಕಾರಾಮ ಚಂದ್ರೇಕರ, ಸಾ: ಪೊಳೆಂ, ಕಾಣಕೋಣ, ಗೋವಾ ಇವರು ಮಾನ್ಯ ಸೆಶನ್ಸ್ ನ್ಯಾಯಾಲಯ, ಕಾರವಾರ ರವರಲ್ಲಿ ಮೇಲ್ಮನವಿಯನ್ನು ಸಲ್ಲಿಸುತ್ತಾ, ಈ ಪ್ರಕರಣದಲ್ಲಿ ವಾಹನದ ಮಾಲೀಕರಿಗೆ ನೋಟೀಸನ್ನು ನೀಡಿಲ್ಲವೆಂದೂ, ಗೋವಾ ರಾಜ್ಯದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ವಾಹನದ ಮಾಲೀಕನ ಹೆಸರು ಮತ್ತು ವಿಳಾಸವನ್ನು ಪತ್ತೆ ಹಚ್ಚಿಕೊಂಡಿರುವುದಿಲ್ಲವೆಂದೂ, ಪ್ರಜಾವಾಣಿ ಮತ್ತು ಡೆಕ್ಕನ್‌ಹೆರಾಲ್ಡ್ ದಿನಪತ್ರಿಕೆಗಳು ಕರ್ನಾಟಕ ರಾಜ್ಯದ ಪ್ರಾದೇಶಿಕ ಪತ್ರಿಕೆಗಳಾಗಿದ್ದು, ಇವುಗಳು ಗೋವಾ ರಾಜ್ಯದಲ್ಲಿ ಪ್ರಸಾರವಾಗುವುದಿಲ್ಲವೆಂದೂ, ಆದ ಕಾರಣ ನೋಟೀಸು ನೀಡದೆ ಹೊರಡಿಸಿರುವಂತಹ ಮುಟ್ಟುಗೋಲು ಆದೇಶವು ರದ್ದುಗೊಳ್ಳತಕ್ಕದೆಂದು ಮೇಲ್ಮನವಿ ಸಲ್ಲಿಸಿದ್ದನ್ನು ಪುರಸ್ಕರಿಸಿ, ಮಾನ್ಯ ಸೆಶನ್ಸ್ ನ್ಯಾಯಾಲಯದ ಕ್ರಿಮಿನಲ್ ಅಪೀಲ್ ಸಂಖ್ಯೆ: 14/89 ದಿನಾಂಕ: 2.1.1993 ರಂತೆ ಪ್ರಾಧಿಕಾರದ ಮುಟ್ಟುಗೋಲು ಆದೇಶವನ್ನು ತಳ್ಳಿಹಾಕಿ, ಈ ಪ್ರಕರಣವನ್ನು ನಿಯಮಗಳನ್ವಯ ಹೊಸದಾಗಿ ವಿಲೇವಾರಿ ಮಾಡಲು ಆದೇಶಿಸಿರುತ್ತಾರೆ.

4. ಮಾನ್ಯ ಸೆಶನ್ಸ್ ನ್ಯಾಯಾಲಯದ ಆದೇಶವನ್ನು ಗೌರವಿಸುತ್ತಾ, ಲಭ್ಯವಿರುವ ದಾಖಲೆಗಳು ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನಾಧರಿಸಿ, ಮುಟ್ಟುಗೋಲು ನಡಾವಳಿಯನ್ನು ಪ್ರಾರಂಭಿಸುವ ಮುನ್ನ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಬಿ) 1(ಸಿ) ಪ್ರಕಾರ ವಿಚಾರಣೆಯನ್ನು ಕೈಗೆತ್ತಿಕೊಂಡು ಫಿರ್ಯಾದುದಾರರು ಸಲ್ಲಿಸಿರುವ ಪ್ರತಿಗಳನ್ನು ಸಿ.ಆರ್.ಪಿ.ಸಿ. ಕಲಂ 207 ರಂತೆ ಅರ್ಜಿದಾರರಿಗೆ ನೀಡಿ, ಅವರ ಮೇಲೆ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 34 ರನ್ವಯ ಹೊರಿಸಿದ ಆರೋಪದ ಬಗ್ಗೆ ಓದಿ ವಿವರಿಸಲಾಗಿ, ಅರ್ಜಿದಾರರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಲ್ಲಗಳೆದಾಗ, ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿ.ಡಬ್ಲ್ಯೂ-1 ನೇಯವರನ್ನು ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ, ನಿಶಾನೆ ಪಿ-1 ನೇದನ್ನು ಗುರ್ತಿಸಿಕೊಂಡಿರುತ್ತಾರೆ. ಈ ಪ್ರಕರಣದ ಪಂಚಸಾಕ್ಷಿ ನಂ. 2 ನೇಯವರಾದ ಮಾರುತಿ ವೆಂಕಟೇಶ ನಾಯ್ಕ ಇವರು ದಿನಾಂಕ: 27.12.1998 ರಂದು ಮೃತಪಟ್ಟ ಬಗ್ಗೆ ತನಿಖಾಧಿಕಾರಿಗಳು ದಿನಾಂಕ: 23.10.1999 ರಂದು ವರದಿಸಿದ್ದರಿಂದ

ಸದರಿಯವರ ವಿಚಾರಣೆಯನ್ನು ಕೈಬಿಡಲಾಗಿದೆ. ಅದೇ ರೀತಿ ಪಂಚಸಾಕ್ಷಿ ನಂ.1 ನೆಯವರಾದ ಮನೋಹರ ಯಲ್ಲಪ್ಪಾ ಪಾಟೀಲ ಇವರು ಮಹಾರಾಷ್ಟ್ರದ ಮುಂಬಯಿಯಲ್ಲಿ ವಾಸಿಸುತ್ತಿರುವುದಾಗಿ ಕಳೆದ 1999ನೇ ಇಸ್ವಿಯಿಂದ ತನಿಖಾಧಿಕಾರಿಗಳು ವರದಿ ಸಲ್ಲಿಸುತ್ತಾ ಬಂದಿದ್ದು, ಆನಂತರದ ಕೆಲವು ವರ್ಷಗಳಲ್ಲಿ ಸದರಿಯವರು ಕೆಲವೊಂದು ಖುದ್ದಾಗಿ ನೋಟೀಸನ್ನು ಸ್ವೀಕರಿಸಿದ್ದು, ಮತ್ತೊಮ್ಮೆ ಅವರ ಮಗ ಅಥವಾ ಮಗಳು ನೋಟೀಸನ್ನು ಸ್ವೀಕರಿಸಿರುತ್ತಾರೆ. ಸಾಕಷ್ಟು ವರ್ಷಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಈ ಸಾಕ್ಷಿದಾರರು ಈ ಪ್ರಾಧಿಕಾರದಲ್ಲಿ ಹಾಜರಾಗದಿದ್ದುದರಿಂದ ಸದರಿಯವರ ಸಾಕ್ಷಿಯನ್ನು ಸಹ ಕೈಬಿಡಲಾಯಿತು.

5. ಸರ್ಕಾರದ ಪರವಾಗಿ ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರು ತನ್ನ ಪರ ವಾದವಿವಾದವನ್ನು ಮಂಡಿಸಿರುತ್ತಾರೆ. ಪಿ.ಡಬ್ಲ್ಯೂ-1 ನೆಯವರ ಹೇಳಿಕೆ ಹಾಗೂ ಅಭಿಯೋಜಕರ ಪರ ಸಲ್ಲಿಸಿರುವ ಲಿಖಿತ ದಾಖಲೆಗಳ ಆಧಾರದ ಮೇಲೆ ಅರ್ಜಿದಾರರ ವಿರುದ್ಧ ಸಾಕಷ್ಟು ಸಾಕ್ಷ್ಯಾಧಾರಗಳು ಇದ್ದದ್ದು ಕಂಡುಬಂದಿದ್ದರಿಂದ ದಂಡ ಪಕ್ರಿಯಾ ಸಂಹಿತೆ ಕಲಂ 313 ರ ಅಡಿಯಲ್ಲಿ ಅರ್ಜಿದಾರರ ಪರ ಹೇಳಿಕೆಯನ್ನು ಪಡೆಯುವುದಕ್ಕಾಗಿ ಸದರಿಯವರಿಗೆ ಸಾಕಷ್ಟು ನೋಟೀಸುಗಳನ್ನು ಕಳುಹಿಸಲಾಗಿ, ಅರ್ಜಿದಾರರು ಒಮ್ಮೆಯೂ ಸಹ ಈ ಪ್ರಾಧಿಕಾರದಲ್ಲಿ ಹಾಜರಿರುವುದಿಲ್ಲ. ಅಲ್ಲದೇ ಅರ್ಜಿದಾರರ ಪರ ಸಾಕ್ಷಿ ಅಥವಾ ವಾದ ವಿವಾದಕ್ಕಾಗಿ ದಿನಾಂಕ: 06.07.2004, 20.07.2004, 27.07.2004 ಮತ್ತು 10.08.2004 ರಂತೆ ನಾಲ್ಕು ಬಾರಿ ಕಾಲಾವಕಾಶವನ್ನು ನೀಡಿ, ಪ್ರಾಧಿಕಾರದ ಮುದ್ದಾಂ ಪುಸ್ತಕದ ಮೂಲಕ ಅರ್ಜಿದಾರ ಪರ ವಕೀಲರಿಗೆ ನೋಟೀಸಗಳನ್ನು ಕಳುಹಿಸಲಾಗಿ ಒಮ್ಮೆಯೂ ಸಹ ಅವರು ಹಾಜರಿರುವುದಿಲ್ಲ. ಆದುದರಿಂದ ಅರ್ಜಿದಾರರ ಪರ ಹೇಳಿಕೆಯಾಗಲಿ, ವಾದವಿವಾದವಾಗಲೀ ಇಲ್ಲವೆಂದು ಪರಿಗಣಿಸಲಾಯಿತು ಹಾಗೂ ಅಭಿಯೋಜಕರ ಪಕ್ಷದವರು ನುಡಿದಿರುವ ಸಾಕ್ಷಿಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಕಾಣಿಸಿದ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡುಬಂತು.

**6. ವಿವಾದಾಂಶಗಳು:**

1. ಯಲ್ಲಾಪುರ-ಹುಬ್ಬಳ್ಳಿ ರಸ್ತೆಯ ತೆಂಗಿನಕೇರಿ ಕತ್ರಿಯ ಹತ್ತಿರ ಬೆಳಿಗ್ಗೆ ಸುಮಾರು 10-45 ಕ್ಕೆ ಕಿರವತ್ತಿ ಕಡೆಯಿಂದ ಜಿಡಿಇ-2087ನೇ ನಂಬರಿನ ಕಾರನ್ನು ಫಿರ್ಯಾದಿ ಕಡೆಯವರು ಬೆನ್ನತ್ತಿದಾಗ ಬಾಳೆಗುಳಿ ಕತ್ರಿಯ ಹತ್ತಿರದವರೆಗೆ ಬಂದು ಅದರ ಚಾಲಕ ಮತ್ತು ಇನ್ನೊಬ್ಬನು ಬಿಟ್ಟು ಹೋದ ಸದರಿ ಕಾರಿನಲ್ಲಿ ಪರಿಶೀಲಿಸಿದಾಗ ಅದರಲ್ಲಿದ್ದ ಒಟ್ಟು ಹನ್ನೊಂದು ಪೊಟ್ಲೆಗಳಲ್ಲಿ ಪ್ರತಿಯೊಂದರಲ್ಲಿ 750 ಮಿ.ಲೀ.ನ 24 ಸೀಸೆಗಳಂತೆ ಒಟ್ಟು 288 ಸೀಸೆಗಳಲ್ಲಿ ಸೋನಾ ಕೊಕೊನೆಟ್ ಫೆನ್ನಿಯನ್ನು ಸಾಗಿಸುತ್ತಿದ್ದರೆಂಬುದನ್ನು ಅಭಿಯೋಜನೆ ಪಕ್ಷದವರು ನಿಸ್ಸಂಶಯವಾಗಿ ರುಜುವಾತುಪಡಿಸಿರುತ್ತಾರೆಯೇ?
2. ಘಟನೆ ಸಂಭವಿಸಿದಾಗ ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ಆ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರು ಶಾಮೀಲಾಗದೇ ಈ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ?
3. ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ?

**7. ಉತ್ತರಗಳು**

ಅಂಶ 1 :- ಸಕಾರಾತ್ಮಕವಾಗಿ

ಅಂಶ 2 :- ನಕಾರಾತ್ಮಕವಾಗಿ

ಅಂಶ 3 :- ಸಕಾರಾತ್ಮಕವಾಗಿ

8. ಒಂದನೆಯ ವಿವಾದಾಂಶವನ್ನು ರುಜುವಾತುಪಡಿಸುವುದಕ್ಕಾಗಿ ಅಭಿಯೋಜಕರ ಪರ ಮುಖ್ಯ ಸಾಕ್ಷಿದಾರರಾದಂತಹ ಈ ಪ್ರಕರಣದ ಫಿರ್ಯಾದಿ ಎ.ಎಸ್.ಪಿಸೆ, ಪೊಲೀಸ್ ನಿರೀಕ್ಷಕರು, ದಿನಾಂಕ: 6.11.1999 ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ಪಿ.ಡಬ್ಲ್ಯೂ-1 ರಂತೆ ತನ್ನ ಸಾಕ್ಷ್ಯವನ್ನು ನುಡಿಯುತ್ತಾ, ಮಾನ್ಯ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಯಲ್ಲಿ ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿರುತ್ತಾರೆ. ಆನಂತರ ಅರ್ಜಿದಾರರ ಪರ ವಕೀಲರ ಪಾಟಿ ಸವಾಲಿನಲ್ಲಿ ಪ್ರ.ಮಾ.ವರದಿಯಲ್ಲಿ ಆರೋಪಿಗಳ ಹೆಸರು ನಮೂದಿಸಿಲ್ಲವೆಂದೂ, ಅಲ್ಲದೇ ಎಷ್ಟು ಜನರಿದ್ದರೆಂಬುದನ್ನು ನಮೂದಿಸಿಲ್ಲವೆಂದೂ, ಅವರ ಹೆಸರು ಖಾತ್ರಿಯಾಗದಿದ್ದುದರಿಂದ ಪ್ರಥಮ ವರದಿಯಲ್ಲಿ ನಮೂದು ಮಾಡಿರಲಿಲ್ಲವೆಂದೂ, ಈ ಪ್ರಕರಣದಲ್ಲಿ ತಾನೇ ತನಿಖೆ ಮಾಡಿದ್ದೆನೆಂದೂ, ಆರೋಪಿ ಜುವಾವ್ ಬಗ್ಗೆ ನ್ಯಾಯಾಲಯ ಬಿಡುಗಡೆ ಮಾಡಿದ ವಿಷಯ ತನಗೆ ಗೊತ್ತಿಲ್ಲವೆಂದೂ, ಪಂಚರ ಸಾಕ್ಷಿ ನ್ಯಾಯಾಲಯದಲ್ಲಿ ಆಗಿದೆಯೇ ಹೇಗೆ ಎಂಬ ಬಗ್ಗೆ ತನಗೆ ಗೊತ್ತಿಲ್ಲವೆಂದೂ, ಚಾರ್ಜ್‌ಶೀಟ್ ಹಾಕಿದ್ದಲ್ಲಿ ಏನಾಗಿದೆ ಎಂದು ತನಗೆ ಈಗ ನೆನಪಿಲ್ಲವೆಂದೂ, ವಾಹನ ಚಾಲಕನ ಹತ್ತಿರ ವಾಹನದ ಮಾಲೀಕನ ಬಗ್ಗೆ ತನಿಖೆ ಕಾಲಕ್ಕೆ ಸ್ವಖುಷಿ ಹೇಳಿಕೆಯಾಗಲೀ ಅಥವಾ ಇತರೇ ಹೇಳಿಕೆಯಾಗಲೀ ಪಡೆಯಲು ಆಗದ ಕಾರಣ ಹೇಳಿಕೆ ಪಡೆದಿಲ್ಲವೆಂದೂ, ಮಾಲೀಕನ ಬಗ್ಗೆ ಹಾಗೂ ಗುನ್ಹೆಯ ಬಗ್ಗೆ ಮಾಹಿತಿ ಇತ್ತು ಎನ್ನುವ ಬಗ್ಗೆ ತನ್ನ ತನಿಖೆಯಲ್ಲಿ ಅವಶ್ಯಕತೆ ಕಂಡುಬರಲಿಲ್ಲವೆಂದೂ, ಮಾಲೀಕರ ಹತ್ತಿರ ಚಾಲಕನ ಬಗ್ಗೆ ಸೂಪರ್‌ವಿಜನ್ ಮಾಡಿದ ಬಗ್ಗೆ ತನಿಖೆ ಮಾಡುವ ಅವಶ್ಯಕತೆ ಕಂಡುಬರಲಿಲ್ಲವೆಂದೂ, ಆದ್ದರಿಂದ ಚಾರ್ಜ್‌ಶೀಟ್ ಹಾಕಿಲ್ಲವೆಂದೂ, ವಾಹನ ಜಪ್ತಾದ ನಂತರ ಮಾಲೀಕನಿಗೆ ಅವನ ವಿಳಾಸ ಪಡೆದು ನೋಟೀಸು ಜಾರಿ ಮಾಡಲಿಲ್ಲವೆಂದೂ, ಆದರೆ ಆರ್.ಟಿ.ಓ. ಕಛೇರಿಯಲ್ಲಿ ಮಾಲೀಕನ ಬಗ್ಗೆ ವಿಚಾರಣೆ ಮಾಡಿದ್ದೆನೆಂದೂ, ಆದರೆ ಅದರ ಬಗ್ಗೆ ಯಾವುದೇ ದಾಖಲೆಯಿಲ್ಲವೆಂದೂ ಮತ್ತು ಘಟನೆ ವಿಷಯವಾಗಿ ಮಾಲೀಕರಿಗೆ ಯಾವುದೇ ಮಾಹಿತಿ ಇರಲಿಲ್ಲವೆನ್ನುವುದು ಸರಿಯಲ್ಲವೆಂದೂ, ಯಾಕೆಂದರೆ ಚಾಲಕನಿಗೆ ಮಾಲೀಕರು ವಾಹನವನ್ನು ಬೆಳಗಾಂ-ಹುಬ್ಬಳ್ಳಿ ಕಡೆಗೆ ಓಡಾಡಿಸಲು ಕೊಟ್ಟಿದ್ದರಿಂದ ಆದ್ದರಿಂದ ವಾಹನದ ಮಾಲೀಕರಿಗೆ ಯಾವುದೇ ತಿಳುವಳಿಕೆ ಇರಲಿಲ್ಲವೆನ್ನುವುದು ಸರಿಯಲ್ಲವೆಂದೂ, ಮುಟ್ಟುಗೋಲು ಹಾಕಿಕೊಂಡಂತಹ ವಾಹನವನ್ನು ಅರ್ಜಿದಾರರಿಗೆ ವಾಪಸ್ ಕೊಡಬೇಕೆನ್ನುವುದು ಸರಿಯಲ್ಲವೆಂದೂ, ತಾನು ಯಾವುದೇ ಪಂಚನಾಮೆ ಮಾಡಿಲ್ಲ ಹಾಗೂ ಸುಳ್ಳು ಚಾರ್ಜ್‌ಶೀಟ್ ಹಾಕಿದ್ದೇನೆ ಎನ್ನುವುದು ಸರಿಯಲ್ಲವೆಂದು ನುಡಿದಿರುತ್ತಾರೆ.

**9. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:-** ಅಭಿಯೋಜನಾಪಕ್ಷದವರು ಹಾಜರುಪಡಿಸಿದ ದಾಖಲೆಗಳ ಪೈಕಿ ಅಂತಿಮ ಆರೋಪಣಾ ಪಟ್ಟಿಯ ನಕಲನ್ನು ಸಹ ಸಲ್ಲಿಸಿದ್ದು, ಅದರನ್ವಯ ಈ ಪ್ರಕರಣದಲ್ಲಿ ಜುವಾಂವ್ ಪೌಲ್ ತಂದೆ ಡಿಕೊಸ್ತಾ ಸಾ: ಲೊಟಲಿಮ್ ಮಡಗಾಂವ, ಗೋವಾ ಈತನನ್ನು ದಸ್ತಗಿರಿ ಮಾಡಿ, ಆತನ ವಿರುದ್ಧ ಸಿ.ಸಿ. ನಂಬರ್ 64/88 ರಂತೆ ಆರೋಪಣಾ ಪಟ್ಟಿಯನ್ನು ಸಲ್ಲಿಸಿರುವುದು ಕಂಡು ಬರುತ್ತದೆ. ಅದೇ ರೀತಿ ರಾಸಾಯನಿಕ ವಿಶ್ಲೇಷಣಾ ವರದಿಯನ್ವಯ ಮಾದರಿ ಸೀಸೆಗಳಲ್ಲಿ ಆಲ್ಕೋಹಾಲ್ ಪತ್ತೆಯಾಗಿರುವುದಾಗಿ ತಜ್ಞರು ಅಭಿಪ್ರಾಯಪಟ್ಟಿರುತ್ತಾರೆ. ಪ್ರಕರಣ ದಾಖಲಾಗಿ 12 ವರ್ಷಗಳ ನಂತರ ಈ ಸಾಕ್ಷಿದಾರರು ಸಾಕ್ಷ್ಯವನ್ನು ನುಡಿದಿರುವುದರಿಂದ ಸಹಜವಾಗಿ ಈ ಪ್ರಕರಣದ ಫಲಿತಾಂಶದ ಬಗ್ಗೆ ಮತ್ತು ತನಿಖೆಯ ಈ ಸಾಕ್ಷಿದಾರರಿಗೆ ನೆನಪಿಲ್ಲದಿರಬಹುದಾಗಿದೆ. ಆರ್.ಟಿ.ಓ. ಕಛೇರಿಯಲ್ಲಿ ಮಾಲೀಕನ ವಿಚಾರಣೆ ಮಾಡಿದ ಬಗ್ಗೆ

ಸಾಕ್ಷಿಯನ್ನು ಸರಿಯಾಗಿಯೇ ನುಡಿದಿರುತ್ತಾರೆ. ಈ ರೀತಿ ವಿಚಾರಣೆ ಮಾಡಿದ ಬಗ್ಗೆ ದಾಖಲೆಯನ್ನು ಸಂಬಂಧಪಟ್ಟ ಕಡತದಿಂದ ತರಿಸಿಕೊಳ್ಳಬೇಕೆ ಹೊರತು ಈ ಸಾಕ್ಷಿದಾರರಿಂದಲ್ಲಾ, ಅಲ್ಲದೇ ಘಟನೆಯ ಬಗ್ಗೆ ವಾಹನದ ಮಾಲೀಕನಿಗೆ ಯಾವುದೇ ತಿಳುವಳಿಕೆ ಇರಲಿಲ್ಲವೆಂಬ ಅಂಶವನ್ನು ಸದರಿ ಸಾಕ್ಷಿದಾರರು ತಳ್ಳಿಹಾಕಿದ್ದಾರೆ ಅಲ್ಲದೇ ಅದಕ್ಕೆ ಕಾರಣವನ್ನು ಸಹ ನೀಡಿದ್ದಾರೆ. ಇನ್ನುಳಿದಂತೆ ಎದುರುದಾರರ ಪಕ್ಷದವರಿಗೆ ಸಹಕಾರಿಯಾಗುವುದಕ್ಕೋಸ್ಕರ ಯಾವುದೇ ಪ್ರಶ್ನೆಯನ್ನು ಕೇಳಿರುವುದು ಕಂಡುಬರುತ್ತಿಲ್ಲಾ. ಈ ಕಾರಣದಿಂದಾಗಿ ಅಭಿಯೋಜನೆ ಪಕ್ಷದವರು ಘಟನೆ ಸಂಭವಿಸಿರುವುದನ್ನು ನಿಸ್ಸಂಶಯವಾಗಿ ನಿರೂಪಿಸಿರುವುದು ಸ್ಪಷ್ಟವಾಗಿ ರುಜುವಾತಾಗಿರುತ್ತದೆ.

10. ಈ ಪ್ರಕರಣದಲ್ಲಿ ತಾವು ಶಾಮೀಲಾಗಿಲ್ಲವೆನ್ನುವುದನ್ನು ರುಜುವಾತುಪಡಿಸುವುದಕ್ಕಾಗಿ ಅರ್ಜಿದಾರರಾಗಲೀ ವಾಹನದ ಮಾಲೀಕರಾಗಲೀ ಅಥವಾ ಘಟನೆ ಸಂಭವಿಸಿದ ದಿನ ವಾಹನ ಚಲಾಯಿಸುತ್ತಿದ್ದ ಚಾಲಕನಾಗಲೀ ಈ ಪ್ರಾಧಿಕಾರದಲ್ಲಿ ಒಮ್ಮೆಯೂ ಹಾಜರಾಗಿ ತನ್ನ ಪರ ಸಾಕ್ಷ್ಯವನ್ನು ನುಡಿದಿರುವುದಿಲ್ಲ. ಅಲ್ಲದೇ ವಾಹನದ ಮೇಲೆ ಹೊರಿಸಿರುವ ಆರೋಪವನ್ನು ಅಲ್ಲಗಳೆಯುವುದಕ್ಕಾಗಿ ಯಾವುದೇ ದಾಖಲೆಗಳನ್ನು ಹಾಜರುಪಡಿಸಿಲ್ಲ. ಹೀಗಾಗಿ ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದಲ್ಲಿ ಜಪ್ತಿಯಾದಂತಹ ಅಕ್ರಮ ಗೋವಾ ಫೆನ್ನಿಯ ಸೀಸೆಗಳನ್ನು ಸಾಗಿಸಿದ ಪ್ರಕರಣವು ತಾನು ಶಾಮೀಲಾಗದೇ ಮತ್ತು ತನ್ನ ಗಮನಕ್ಕೆ ಬಾರದೇ ನಡೆದಿದೆ ಎಂಬುದನ್ನು ಸಾಬೀತುಪಡಿಸಲು ಎದುರುದಾರರ ಪಕ್ಷದವರು ವಿಫಲರಾಗಿರುವುದು ಕಂಡುಬರುತ್ತದೆ. ಹೀಗಾಗಿ ಎರಡನೆಯ ವಿವಾದಾಂಶವನ್ನು ನಕಾರಾತ್ಮಕವಾಗಿ ಉತ್ತರಿಸಲಾಗಿದೆ.

11. ಒಂದನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಈ ಘಟನೆ ನಡೆದಿರುವುದನ್ನು ಅಭಿಯೋಜನೆ ಪಕ್ಷದವರು ನಿಸ್ಸಂಶಯವಾಗಿ ರುಜುವಾತುಪಡಿಸಿರುವುದರಿಂದ ಮತ್ತು ಘಟನೆ ಸಂಭವಿಸಿದ ದಿನದಂದು ತಾನು ಈ ಕೃತ್ಯದಲ್ಲಿ ಭಾಗವಹಿಸಿಲ್ಲವೆಂಬುದನ್ನು ಎದುರುದಾರರ ಪಕ್ಷದವರು ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸದಿರುವುದರಿಂದ, ಅಲ್ಲದೇ ಗೌರವಾನ್ವಿತ ಉಚ್ಚ ನ್ಯಾಯಾಲಯ, ಬೆಂಗಳೂರು ರವರ ಕ್ರಿಮಿನಲ್ ರಿವಿಜನ್ ಪಿಟೀಷನ್ ಸಂಖ್ಯೆ: 1117/2004, ದಿನಾಂಕ: 11.08.2004 (ಶ್ರೀ ಮಹಮ್ಮದ್ ಅಲಿ ವಿರುದ್ಧ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ) ರಲ್ಲಿ ಈ ಕೆಳಗಿನಂತೆ ತೀರ್ಪಾಗಿರುತ್ತದೆ.

" It cannot be said that the owner of the lorry did not have knowledge of the materials being transported by him in the lorry illegally, because the owner himself was driving the lorry in question".

ಈ ಪ್ರಕರಣದಲ್ಲಿಯೂ ಸಹ ಆರೋಪಿ ಮತ್ತು ವಾಹನದ ಮಾಲೀಕನು ಒಬ್ಬನೇ ಆಗಿರುವುದರಿಂದ ಪ್ರಕರಣದಲ್ಲಿ ಜಪ್ತಿಯಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ.

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಪ್ರಕಾರ ಅನುಸರಿಸಬೇಕಾದಂತಹ ಕ್ರಮಗಳನ್ನೆಲ್ಲ ಅನುಸರಿಸಿದ ನಂತರ, ಕಲಂ 43 (ಎ)(1) ರಲ್ಲಿ ನನಗೆ ಪ್ರದತ್ತವಾದಂತಹ ಅಧಿಕಾರವನ್ನು ಚಲಾಯಿಸಿ, ಯಲ್ಲಾಪುರ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ: 163/1987, ದಿನಾಂಕ: 20.12.1987 ರಲ್ಲಿ ಜಪ್ತಿಯಾದಂತಹ ಅಂಬಾಸಿಡರ್ ಕಾರ್ ಸಂಖ್ಯೆ: ಜಿಡಿಇ-2087 ನೇದನ್ನು ಕಲಂ 43ಎ (2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

(ಈ ಆದೇಶವನ್ನು ಇಂದು ಅಂದರೆ 2005ನೇ ಇಸ್ವಿಯ ಜನವರಿ ತಿಂಗಳ 7ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ ತಿದ್ದಿದ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು).

**ಎಸ್. ಎಸ್. ವಡಕಣ್ಣವರ**
ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅನುಬಂಧ-1**

**(ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಪಟ್ಟಿ)**

ಪ್ರಾ.ಸಾ.ನಂ. 1 :- ಅಶೋಕ ಎಸ್.ಪಿಸೆ, ಪಿ.ಐ

**ಅನುಬಂಧ-2**

**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

...........ಇಲ್ಲ ..............

**ಅನುಬಂಧ-3**

**(ಪ್ರಾಸಿಕ್ಯೂಷನ್ ಪರ ಗುರ್ತಿಸಲಾದ ದಾಖಲೆಗಳು)**

ನಿಶಾನೆ ಪಿ1 :- ಪಂಚನಾಮೆ
ನಿಶಾನೆ ಪಿ1ಎ :- ಪಂಚನಾಮೆ ಮೇಲಿನ ಫಿರ್ಯಾದಿಯ ರುಜು

**ಅನುಬಂಧ-4**

**(ಎದುರುದಾರರ ಪರ ಗುರ್ತಿಸಲಾದ ದಾಖಲೆಗಳು)**

............ಇಲ್ಲಾ.............

**ಎಸ್. ಎಸ್. ವಡಕಣ್ಣವರ**
ಪಿ.ಆರ್.114 ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಯೋಜನಾ ಸಮನ್ವಯ ಅಧಿಕಾರಿಯವರ ಕಛೇರಿ, ಮಲ್ಪೆ ಮತ್ತು ಹೊನ್ನಾವರ ಮೀನುಗಾರಿಕೆ ಬಂದರುಗಳ ಯೋಜನೆ, ಮಲ್ಪೆ, ಉಡುಪಿ ಜಿಲ್ಲೆ.**

**ಸಾರ್ವಜನಿಕ ಪ್ರಕಟಣೆ ಸಂ: ಪಂವಾಯೋ:2:2002-03 ದಿನಾಂಕ: 17ನೇ ಡಿಸೆಂಬರ್ 2004**

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಿಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ)

ಅಡಿಯಲ್ಲಿ ಮತ್ತು ಸೆಕ್ಷನ್ 7(1)ರಡಿಯಲ್ಲಿ ವ್ಯಾಖ್ಯಾನಿಸಿರುವಂತೆ ಸಕ್ಷಮ ಮತ್ತು ಮೇಲ್ಮನವಿ ಪ್ರಾಧಿಕಾರಿಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ಯೋಜನಾ ಸಮನ್ವಯಾಧಿಕಾರಿ, ಮಲ್ಪೆ ಕಛೇರಿಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗೆ ನಮೂದಿಸಿದಂತೆ ಗುರುತಿಸಲಾಗಿದೆ.

| **ಸಕ್ಷಮ ಪ್ರಾಧಿಕಾರ** | **ಅಪೀಲು ಪ್ರಾಧಿಕಾರ** |
| --- | --- |
| ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, (ಆಡಳಿತ) ಯೋಜನಾ ಸಮನ್ವಯಾಧಿಕಾರಿ, ಮಲ್ಪೆ ಕಛೇರಿ. | ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು. |

ಸರ್ಕಾರದ ಅಧಿನಿಯಮದ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ ಈ ಕೆಳಗೆ ತಿಳಿಸಿರುವ ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1) ಇಲಾಖೆಯ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯದ ವಿವರಗಳು:-** ಯೋಜನಾ ಸಮನ್ವಯಾಧಿಕಾರಿ, ಮಲ್ಪೆ ಇವರು ವಲಯ ಮಟ್ಟದ ಅಧಿಕಾರಿಗಳಾಗಿದ್ದು ಇದರ ಆಡಳಿತ ವ್ಯಾಪ್ತಿಗೆ ದ.ಕ., ಉಡುಪಿ ಮತ್ತು ಉ.ಕ. ಜಿಲ್ಲೆಯ ಮೀನುಗಾರಿಕೆ ಬಂದರುಗಳಾದ ಮಂಗಳೂರು, ಮಲ್ಪೆ, ಗಂಗೊಳ್ಳಿ ಮತ್ತು ಹೊನ್ನಾವರ ಬಂದರುಗಳು ಒಳಪಟ್ಟಿವೆ. ಮಲ್ಪೆ ಮತ್ತು ಹೊನ್ನಾವರ ಬಂದರುಗಳಲ್ಲಿ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1), ಮಂಗಳೂರು ಬಂದರಿನಲ್ಲಿ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ರವರು ಬಂದರಿನ ಚಟುವಟಿಕೆಗಳಲ್ಲಿ ಸಹಕಾರ ನೀಡುತ್ತಿರುವರು. ಈ ಕಛೇರಿಯಲ್ಲಿ ಇತರ ಕೆಲಸ ಕಾರ್ಯಗಳ ಬಗ್ಗೆ ಸಹಕರಿಸಲು ಆಡಳಿತ ವಿಷಯಕ್ಕೆ ಸಂಬಂಧಿಸಿದಂತೆ ಒಬ್ಬರು ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು (ಆಡಳಿತ) ಇವರು ಕಛೇರಿಯಲ್ಲಿ ಇರುತ್ತಾರೆ. ಯೋಜನಾ ಸಮನ್ವಯಾಧಿಕಾರಿ, ಮಲ್ಪೆ ಕಛೇರಿಯಲ್ಲಿ ಮೇಲೆ ತಿಳಿಸಿದ ಅಧಿಕಾರಿಯಲ್ಲದೆ ಈ ಕೆಳಕಂಡ ಸಿಬ್ಬಂದಿ ವ್ಯವಸ್ಥೆ ಇದೆ.

| | | | |
| --- | --- | --- | --- |
| 1) | ಪ್ರಥಮ ದರ್ಜೆ ಸಹಾಯಕ | : | 1 ಹುದ್ದೆ |
| 2) | ದ್ವಿತೀಯ ದರ್ಜೆ ಸಹಾಯಕ | : | 1 ಹುದ್ದೆ |
| 3) | ಶೀಘ್ರಲಿಪಿಗಾರ | : | 1 ಹುದ್ದೆ |
| 4) | ಬೆರಳಚ್ಚುಗಾರ | : | 1 ಹುದ್ದೆ |
| 5) | ಹಿರಿಯ ವಾಹನ ಚಾಲಕ | : | 1 ಹುದ್ದೆ |
| 6) | ಗ್ರೂಪ್ 'ಡಿ' ನೌಕರರು | : | 3 ಹುದ್ದೆಗಳು |
| | ಒಟ್ಟು | : | 8 ಹುದ್ದೆಗಳು |

ಈ ಕಛೇರಿಯು ವಲಯ ಮಟ್ಟದ ಕಛೇರಿ ಆಗಿದ್ದು, ಜಿಲ್ಲೆಗಳಲ್ಲಿ ಇರುವ ಇಲಾಖಾ ಕಛೇರಿಗಳ ವಿವರ ಈ ಕೆಳಗಿನಂತಿರುತ್ತದೆ.

1) **ಉಡುಪಿ ಜಿಲ್ಲೆ:-** ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1), ಬಂದರು ಯೋಜನೆ, ಮಲ್ಪೆ

2) **ಉ.ಕ. ಜಿಲ್ಲೆ:-** ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1), ಬಂದರು ಯೋಜನೆ, ಹೊನ್ನಾವರ.

3) **ದ.ಕ. ಜಿಲ್ಲೆ:-** ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1), ಬಂದರು, ಯೋಜನೆ, ಮಂಗಳೂರು.

ಮೀನುಗಾರಿಕೆ ಇಲಾಖೆಗೆ ಸಂಬಂಧಿಸಿದಂತೆ ಮೀನುಗಾರರ ಸಮುದಾಯದ ಅಭಿವೃದ್ಧಿಗಾಗಿ ಈ ಕೆಳಗೆ ನಮೂದಿಸಲಾದ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

**ರಾಜ್ಯವಲಯ ಯೋಜನೆಗಳು:**

ಈ ಯೋಜನೆಯಲ್ಲಿ ಮಲ್ಪೆ, ಹೊನ್ನಾವರ ಮತ್ತು ಮಂಗಳೂರು ಮೀನುಗಾರಿಕೆ ಬಂದರುಗಳಲ್ಲಿ, ನೀರಿನ ಮತ್ತು ವಿದ್ಯುತ್ ದೀಪದ ವ್ಯವಸ್ಥೆ, ರಸ್ತೆಗಳು, ಕಾಂಕ್ರೀಟೀಕರಣ, ಶೌಚಾಲಯ, ಕಟ್ಟಡ ನಿರ್ಮಾಣ ಮತ್ತು ದುರಸ್ತಿ ಇತ್ಯಾದಿ ಬಗ್ಗೆ ನಿರ್ವಹಣೆ ಹಾಗೂ ಬಂದರುಗಳಲ್ಲಿ ವಿವಿಧ ರೀತಿಯ ಶುಲ್ಕ ವಸೂಲಾತಿ, ಬಂದರಿನ ಶುಚಿತ್ವ ನಿರ್ವಹಣೆ ಇತ್ಯಾದಿ.

**ಕೇಂದ್ರ ಪುರಸ್ಕೃತ ಯೋಜನೆಗಳು:**

ಈ ಯೋಜನೆಯಲ್ಲಿ ಬಂದರು ವಿಸ್ತರಣೆ, ಜೆಟ್ಟಿಗಳ ನಿರ್ಮಾಣ, ಇತ್ಯಾದಿ ಕಾರ್ಯಕ್ರಮ.

**2) ಅಧಿಕಾರಿಗಳು ಮತ್ತು ನೌಕರರ ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ:-** ಮೇಲೆ ವಿವರಿಸಿದಂತೆ ಶೀರ್ಷಿಕೆ (1)ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ವಲಯ ಮಟ್ಟದಲ್ಲಿ ಯೋಜನಾ ಸಮನ್ವಯಾಧಿಕಾರಿ, ಮಲ್ಪೆ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ಎಲ್ಲಾ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ಯೋಜನಾ ಸಮನ್ವಯಾಧಿಕಾರಿ ಯವರದ್ದಾಗಿರುತ್ತದೆ.

ಈ ಕಛೇರಿಯಲ್ಲಿ ಒಬ್ಬ ಪ್ರಥಮ ದರ್ಜೆ ಸಹಾಯಕರು, ಒಬ್ಬ ದ್ವಿತೀಯ ದರ್ಜೆ ಸಹಾಯಕರು ಕಾರ್ಯನಿರ್ವಹಿಸುತ್ತಿದ್ದು ಇವರು ಸರ್ಕಾರಿ ಆಡಳಿತ ನಿಯಮಾವಳಿಯಂತೆ ಕಛೇರಿಯ ದೈನಂದಿನ ಪತ್ರ ವ್ಯವಹಾರದ ಜವಾಬ್ದಾರಿ ಹೊಂದಿರುತ್ತಾರೆ.

**3) ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:-** ಕಛೇರಿ ಸಿಬ್ಬಂದಿ ವರ್ಗದವರು ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಪೂರಕವಾಗಿ ಸಹಾಯಕವಾಗುವಂತೆ ಕಾರ್ಯನಿರ್ವಹಿಸುವರು. ಸಾರ್ವಜನಿಕರಿಂದ, ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಪತ್ರಗಳನ್ನು ಕಛೇರಿ ಮುಖ್ಯಸ್ಥರ ಕಿರು ಸಹಿ ಪಡೆದು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ನೀಡಲಾಗುವುದು. ತುರ್ತು ಟಪ್ಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ಕಛೇರಿಗಳ ಮುಖ್ಯಸ್ಥರ ಆದೇಶದನ್ವಯ ವಿಷಯ ನಿರ್ವಾಹಕರು ಕಛೇರಿ ಕೈಪಿಡಿಯ ಪ್ರಕಾರ ಕಡತವನ್ನು ಪ್ರಾರಂಭಿಸಿ ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವರು.

**4) ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:-** (1) ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದಪತ್ರಗಳನ್ನು ಸಾಮಾನ್ಯ ಸ್ವೀಕೃತಿ ವಿಭಾಗದಲ್ಲಿ ನೋಂದಾಯಿಸಿ ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ, ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.

2) ಆಗಿಂದಾಗ್ಗೆ ಅಧಿಕಾರಿಗಳಿಂದ ವಿಷಯ ನಿರ್ವಾಹಕರ ಮೇಲು ತಪಾಸಣೆ ಕಾರ್ಯ.

3) ಸರ್ಕಾರವು: ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತ ಗತಿಯಲ್ಲಿ ಪಾಲಿಸುವುದು.

4) ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

5) ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:

ಇಲಾಖೆಯಿಂದ ಹೊರಡಿಸಲಾಗುವ ಪ್ರಮುಖ ಪ್ರಕಟಣೆ ಹಾಗೂ ಆದೇಶದ ಪ್ರತಿಗಳನ್ನು ಕಛೇರಿಯ ಪ್ರಕಟಣಾ ಫಲಕದಲ್ಲಿ ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗುತ್ತದೆ. ಅವುಗಳ ಪ್ರತಿಗಳನ್ನು ಸಂಬಂಧಪಟ್ಟ ಅಧೀನಾಧಿಕಾರಿಗಳಿಗೆ ಕಳುಹಿಸಿ ಅವರ ಕಛೇರಿಯ ಪ್ರಕಟಣಾ ಫಲಕದಲ್ಲಿ ಪ್ರಕಟಿಸಲು ಎಲ್ಲಾ ಅಧೀನಾಧಿಕಾರಿಗಳಿಗೆ ಸೂಚನೆಯನ್ನು ನೀಡಲಾಗಿದೆ. ಮೀನುಗಾರಿಕೆ ಬಂದರಿಗೆ ಸಂಬಂಧಪಟ್ಟ ವಿಷಯಗಳ ಬಗ್ಗೆ ಮಾಹಿತಿಯನ್ನು ಯೋಜನಾ ಸಮನ್ವಯಾಧಿಕಾರಿ, ಮಲ್ಪೆರವರಿಂದ ಮತ್ತು ಆಯಾ ಮೀನುಗಾರಿಕೆ ಬಂದರುಗಳ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ಮತ್ತು (ಶ್ರೇಣಿ-2) ಇವರಿಂದ ಸಾರ್ವಜನಿಕರು ಪಡೆಯಬಹುದಾಗಿದೆ. ಈ ಕಛೇರಿಯಲ್ಲಿ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು (ಆಡಳಿತ) ರವರು ಸಾರ್ವಜನಿಕ ಕುಂದುಕೊರತೆ ಸಂಪರ್ಕಾಧಿಕಾರಿಯಾಗಿದ್ದು, ಹೆಚ್ಚಿನ ವಿವರಗಳಿಗೆ ಅವರನ್ನು ಸಂಪರ್ಕಿಸಬಹುದಾಗಿದೆ. ದೂರವಾಣಿ ಸಂಖ್ಯೆ ಹಾಗೂ ವಿಳಾಸ ಈ ಕೆಳಕಂಡಂತಿದೆ.

ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು (ಆಡಳಿತ), ಯೋಜನಾ ಸಮನ್ವಯಾಧಿಕಾರಿ, ಮಲ್ಪೆ ಕಛೇರಿ. ದೂರವಾಣಿ: 0820 2537596
ಮೀನುಗಾರಿಕೆ ಬಂದರು, ಮಲ್ಪೆ ಉಡುಪಿ ಜಿಲ್ಲೆ-576108.

ಪ್ರತಿ ತಿಂಗಳ ಪ್ರಥಮ ಶನಿವಾರವು "ಸಾರ್ವಜನಿಕ ಕುಂದುಕೊರತೆಗಳನ್ನು ಆಲಿಸುವ ದಿನ" ವಾಗಿದ್ದು, ಸದ್ರಿ ದಿನ ಸಾರ್ವಜನಿಕರು ಖುದ್ದಾಗಿ ಯೋಜನಾ ಸಮನ್ವಯಾಧಿಕಾರಿ ಇವರನ್ನು ಭೇಟಿಯಾಗಿ ತಮ್ಮ ಕುಂದುಕೊರತೆಗಳನ್ನು ತಿಳಿಸಿ ಅದಕ್ಕೆ ಪರಿಹಾರವನ್ನು ಪಡೆಯಬಹುದಾಗಿದೆ.

ಯೋಜನಾ ಸಮನ್ವಯಾಧಿಕಾರಿ ಕಛೇರಿ, ಮಲ್ಪೆ ಮತ್ತು ಹೊನ್ನಾವರ
ಮೀನುಗಾರಿಕೆ, ಬಂದರುಗಳ ಯೋಜನೆ, ಮಲ್ಪೆ, ಉಡುಪಿ ಜಿಲ್ಲೆ.

ಪಿ.ಆರ್.115

## ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ

**ಸಂ:ಎ3(ಬಿ1):ಅಮೊ:ಶ್ರೀಗಂಧ:ಹೀರೊಹೊಂಡಸ್ಪ್ಲೆಂಡರ್:5604:2002-03 ದಿನಾಂಕ: 1ನೇ ಜನವರಿ 2005**

**ವಿಷಯ :** ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಸರ್ಕಾರದ ಪರ ವಶಪಡಿಸಿಕೊಂಡಿರುವ ಹೀರೊಹೊಂಡ ಸ್ಪ್ಲೆಂಡರ್ ನೋಂದಣಿ ಸಂಖ್ಯೆ: KA-20-J-5604ನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ :**
1. ವಲಯ ಅರಣ್ಯಾಧಿಕಾರಿ, ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು ಇವರ ದಿನಾಂಕ: 28.03.2003ರ ಪತ್ರ.
2. ಈ ಕಛೇರಿಯ ನ್ಯಾಯಾಲಯದಿಂದ ಹೊರಡಿಸಲಾದ ದಿನಾಂಕ: 5.8.2004 ರ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: 2.9.2004 ರಂದು ಮತ್ತು ಸಹ್ಯಾದ್ರಿ ಕನ್ನಡ ಸ್ಥಳೀಯ ದಿನ ಪತ್ರಿಕೆಯಲ್ಲಿ ದಿನಾಂಕ: 19.08.2004 ರಂದು ಪ್ರಕಟಿಸಲಾಗಿರುತ್ತದೆ.

**ಪ್ರಕರಣದ ಹಿನ್ನೆಲೆ:**

ದಿನಾಂಕ: 28.03.2003 ರಂದು ಗಾಜನೂರು ತನಿಖಾ ಠಾಣೆಗೆ ರಾತ್ರಿ ಸುಮಾರು 12.00 ರ ಸಮಯದಲ್ಲಿ, ತೀರ್ಥಹಳ್ಳಿ ಕಡೆಯಿಂದ ಶಿವಮೊಗ್ಗ ಕಡೆಗೆ ಬಂದ KA-20-J-5604 ರ ನೋಂದಣಿ ಸಂಖ್ಯೆಯ ಹೀರೊಹೊಂಡಾ ಸ್ಪ್ಲೆಂಡರ್ ಬೈಕನ್ನು ತನಿಖಾ ಠಾಣೆಯ ಕರ್ತವ್ಯ ನಿರತ ವನಪಾಲಕರು ಮತ್ತು ಸಿಬ್ಬಂದಿಗಳು ತಪಾಸಿಸಿದಾಗ, 10.00 ಕೆ.ಜಿ. ಶ್ರೀಗಂಧದ ತುಂಡುಗಳು ಮತ್ತು ಚಕ್ಕೆ ಇರುವುದನ್ನು ಕಂಡು, ಅಧಿಕೃತ ರಹದಾರಿ ಇಲ್ಲದೇ ಇರುವುದರಿಂದ, ಬೈಕಿನ ಸವಾರ ಮತ್ತು ಅವನ ಜೊತೆ ಇದ್ದ ಇನ್ನೋರ್ವ ವ್ಯಕ್ತಿಯನ್ನು ದಸ್ತಗಿರಿ ಮಾಡಿ, ವಾಹನ, ಶ್ರೀಗಂಧದ ತುಂಡು ಮತ್ತು ಚಕ್ಕೆಯನ್ನು ಸರ್ಕಾರಿ ಪರ ಅಮಾನತ್ತುಪಡಿಸಿ, ಅರಣ್ಯ ಮೊಕದ್ದಮೆ ದಾಖಲು ಮಾಡಿರುತ್ತಾರೆ. ಮತ್ತು ದಸ್ತಗಿರಿ ಮಾಡಿದ ಆಸಾಮಿಗಳನ್ನು ನ್ಯಾಯಾಂಗ ವಶಕ್ಕೆ ಒಪ್ಪಿಸಿರುತ್ತಾರೆ. ತದನಂತರ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 86, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ನಿಯಮ 144ರ ಪ್ರಕಾರ ತಕ್ಸೀರು ದಾಖಲಿಸಿ, ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ, ವಾಹನ, ಶ್ರೀಗಂಧದ ತುಂಡು ಮತ್ತು ಚಕ್ಕೆ ಸಮೇತ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮ್ಮುಖದಲ್ಲಿ ಹಾಜರುಪಡಿಸಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯಿದೆ 1963 ರ ಸೆಕ್ಷನ್ 71ಎ ಪ್ರಕಾರ 30 ದಿವಸಗಳ ಕಾಲಾವಕಾಶವನ್ನು ಕೊಟ್ಟು ವಾಹನದ ವಾರಸುದಾರರು ಯಾರಾದರು ಇದ್ದರೆ, ವಾಹನಕ್ಕೆ ಸಂಬಂಧಿಸಿದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಶ್ರೀಗಂಧದ ತುಂಡುಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಎಂಬ ಬಗ್ಗೆ, ತಿಳುವಳಿಕೆ ಪತ್ರವನ್ನು ದಿನಾಂಕ: 2.09.2004 ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಮತ್ತು ಸಹ್ಯಾದ್ರಿ ಕನ್ನಡ ಸ್ಥಳೀಯ ದಿನ ಪತ್ರಿಕೆಯಲ್ಲಿ ದಿನಾಂಕ: 19.08.2004 ರಂದು ಪ್ರಕಟಿಸಲಾಗಿರುತ್ತದೆ.

ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಉಡುಪಿ ಇವರು ನೀಡಿದ ಬಿ ಎಕ್ಸ್ಟ್ರಾಕ್ಟ್ ಪ್ರಕಾರ ವಾಹನದ ಮೂಲ ಖರೀದಿದಾರರಿಗೆ, ವಾಹನದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವ ಸಂಬಂಧ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಸೂಕ್ತ ಸಮಜಾಯಿಷಿ ನೀಡಲು ನೋಟೀಸ್ ನೀಡಲಾಗಿರುತ್ತದೆ. ಈ ನೋಟೀಸ್‌ಗೆ ಮೂಲ ಖರೀದಿದಾರರು ಸದರಿ ನೋಂದಣಿ ವಾಹನ ಕೈನೆಟಿಕ್ ಹೊಂಡಾ ವಾಹನವಾಗಿದ್ದು, ಅದು ನನ್ನ ಸ್ವಾಧೀನದಲ್ಲಿರುತ್ತದೆ. ಈ ವಾಹನ ಯಾವುದೇ ಅಕ್ರಮ ಚಟುವಟಿಕೆಗಳಿಗೆ ಬಳಸಿರುವುದಿಲ್ಲ ಮತ್ತು ನೀವು ಅಮಾನತ್ತುಪಡಿಸಿಕೊಂಡಿರುವ ವಾಹನ ಹಿರೋಹೊಂಡ ಸ್ಪ್ಲೆಂಡರ್ ಆಗಿರುವುದರಿಂದ, ಈ ವಾಹನಕ್ಕೂ ನನಗೂ ಯಾವುದೇ ಸಂಬಂಧ ಇರುವುದಿಲ್ಲ. ನನ್ನ ವಾಹನದ ನೋಂದಣಿ ಸಂಖ್ಯೆಯ ನಕಲು ಮಾಡಿ ಅಪರಾಧ ಎಸಗಿರಬಹುದಾಗಿದೆ ಎಂದು ಪತ್ರ ಮುಖೇನ ತಿಳಿಸಿರುತ್ತಾರೆ. ಈ ವಾಹನದ ಮಾಲೀಕತ್ವವನ್ನು ದೃಢೀಕರಿಸಲು ಕನ್ನಡ ದಿನಪತ್ರಿಕೆಯಲ್ಲಿ ಮತ್ತು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿ ಸಾಕಷ್ಟು ಕಾಲಾವಕಾಶ ಕೊಟ್ಟರೂ ಈ ವಾಹನವನ್ನು ವಶಕ್ಕೆ ಇದುವರೆಗೆ ಕೋರದೇ ಇರುವುದನ್ನು ನೋಡಿದರೆ ಇದು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿ, ಉಪಯೋಗಿಸಲ್ಪಟ್ಟಂತಹ ವಾಹನವೆಂದು ದೃಢವಾಗುತ್ತದೆ. ವಾಹನದ ಮಾಲೀಕರು ಮಾಲೀಕತ್ವದ ಬಗ್ಗೆ,

ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ಥರಲ್ಲವೆಂಬುದನ್ನು ಸಾಬೀತುಪಡಿಸಲು ವಿಫಲರಾದ ಕಾರಣ, ಮೇಲ್ಕಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಶ್ರೀ ಜಿ. ಎ. ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಹಿರೋಹೊಂಡಾ ಸ್ಪ್ಲೆಂಡರ್ ನೋಂದಣೆ ಸಂಖ್ಯೆ:KA-20-J-5604 (ಎಂಜೀನ್ ಸಂಖ್ಯೆ: 00E18M26357, ಛಾಸಿಸ್ ಸಂಖ್ಯೆ 00E20C26424) ಶ್ರೀಗಂಧದ ತುಂಡು ಮತ್ತು ಚಕ್ಕೆ 10.00 ಕೆ. ಜಿ. ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡಿರುವ ವಾಹನದ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧದ ತುಂಡುಗಳು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ.

ಈ ಆದೇಶವನ್ನು ಹೊರಡಿಸಿದ 30 ದಿನಗಳೊಳಗೆ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದಿದ್ದರೆ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ದಿನಾಂಕ: 01.01.2005 ರಂದು ಬೆರಳಚ್ಚಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ. ಎ. ಎನ್. ಕರ್ಕೀಕರ್**

ಪಿ.ಆರ್.117 ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ.

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ**

**ಸಂ:ಎ3(ಬಿ1):ಅಮೊ:ಶ್ರೀಗಂಧ:ಮೆಟಡೋರ್:3325:2002-03 ದಿನಾಂಕ: 1ನೇ ಜನವರಿ 2005**

**ವಿಷಯ :** ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಸರ್ಕಾರದ ಪರ ವಶಪಡಿಸಿಕೊಂಡಿರುವ ಮೆಟಡೋರ್ ನೋಂದಣಿ ಸಂಖ್ಯೆ: KA-20-3325ನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ :**
1. ವಲಯ ಅರಣ್ಯಾಧಿಕಾರಿ, ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು ಇವರ ಪತ್ರದ ಸಂಖ್ಯೆ: ವಅಅ:ಸಬೈ: ಅಮೊ:57/ 2002-03 ದಿನಾಂಕ: 05.06.2002
2. ಈ ಕಛೇರಿಯ ನ್ಯಾಯಾಲಯದಿಂದ ಹೊರಡಿಸಲಾದ ದಿನಾಂಕ: 24.08.2002 ರ ಪ್ರಕಟಣೆ ವಿಜಯ ಕರ್ನಾಟಕ ಕನ್ನಡ ದಿನ ಪತ್ರಿಕೆಯಲ್ಲಿ ದಿನಾಂಕ: 12.09.2002 ರಂದು ಪ್ರಕಟಿಸಲಾಗಿರುತ್ತದೆ.

**ಪ್ರಕರಣದ ಹಿನ್ನೆಲೆ:**

ದಿನಾಂಕ: 4.06.2002 ರಂದು ಬಂದ ಖಚಿತ ವರ್ತಮಾನದ ಮೇರೆಗೆ ಸಕ್ರೆಬೈಲು ವನ್ಯಜೀವಿ ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ಗಾಜನೂರು ಅರಣ್ಯ ತನಿಖಾ ಠಾಣೆಯ ಬಳಿ ಕಾಯುತ್ತಿರುವಾಗ ಬೆಳಿಗ್ಗೆ ಸುಮಾರು 10.00 ರ ಸಮಯದಲ್ಲಿ, ತೀರ್ಥಹಳ್ಳಿ ಕಡೆಯಿಂದ ಶಿವಮೊಗ್ಗ ಕಡೆಗೆ ಹೋಗಲು ಬರುತ್ತಿದ್ದ ಮೆಟಡೋರ್ ವಾಹನವನ್ನು (ನೋಂದಣೆ ಸಂಖ್ಯೆKA-20-3325) ತಡೆದು ತಪಾಸಣೆ ಮಾಡಿದಾಗ, ವಾಹನದಲ್ಲಿದ್ದ ಕೆಂಪು ಹಂಚುಗಳ ಕೆಳಗಡೆ 135 ಸಂಖ್ಯೆಯ ಶ್ರೀಗಂಧದ ತುಂಡುಗಳು ಮತ್ತು ಚಕ್ಕೆಗಳು 129.00 ಕೆ.ಜಿ. ಇರುವುದನ್ನು ಕಂಡು ಅಧಿಕೃತ ರಹದಾರಿ ಇಲ್ಲದೇ ಇರುವುದರಿಂದ, ಶ್ರೀಗಂಧದ ತುಂಡು ಮತ್ತು ಚಕ್ಕೆಗಳು ಸರ್ಕಾರಿ ಪರ ಅಮಾನತ್ತುಪಡಿಸಿ, ಅರಣ್ಯ ಮೊಕದ್ದಮೆ ದಾಖಲು ಮಾಡಿರುತ್ತಾರೆ ಮತ್ತು ಈ ಅಪರಾಧದಲ್ಲಿ ಸಿಲುಕಿದ ಆರೋಪಿಯನ್ನು ನ್ಯಾಯಾಂಗ ವಶಕ್ಕೆ ನೀಡಿರುತ್ತಾರೆ. ತದನಂತರ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 86, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969 ರ ನಿಯಮ 144ರ ಪ್ರಕಾರ ತಕ್ಷೀರು ದಾಖಲಿಸಿ, ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ, ವಾಹನ, ಶ್ರೀಗಂಧದ ತುಂಡು ಸಮೇತ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮ್ಮುಖದಲ್ಲಿ ಹಾಜರುಪಡಿಸಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯಿದೆ 1963 ರ ಸೆಕ್ಷನ್ 71ಎ ಪ್ರಕಾರ 30 ದಿವಸಗಳ ಕಾಲಾವಕಾಶವನ್ನು ಕೊಟ್ಟು ವಾಹನದ ವಾರಸುದಾರರು ಯಾರಾದರು ಇದ್ದರೆ, ವಾಹನಕ್ಕೆ ಸಂಬಂಧಿಸಿದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಶ್ರೀಗಂಧದ ತುಂಡುಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಎಂಬ ಬಗ್ಗೆ, ತಿಳುವಳಿಕೆ ಪತ್ರವನ್ನು ದಿನಾಂಕ: 12.09.2002 ರಂದು ವಿಜಯ ಕರ್ನಾಟಕ ಕನ್ನಡ ದಿನ ಪತ್ರಿಕೆಯಲ್ಲಿ ಪ್ರಕಟಿಸಲಾಗಿರುತ್ತದೆ.

ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಉಡುಪಿ ಇವರು ನೀಡಿದ ಬಿ ಎಕ್ಸ್‌ಟ್ರ್ಯಾಕ್ಟ್ ಪ್ರಕಾರ ವಾಹನದ ಮೂಲ ಖರೀದಿದಾರರಿಗೆ, ವಾಹನದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವ ಸಂಬಂಧ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಸೂಕ್ತ ಸಮಜಾಯಿಷಿ ನೀಡಲು ನೋಟೀಸ್ ನೀಡಲಾಗಿರುತ್ತದೆ. ಈ ನೋಟೀಸ್‌ಗೆ ಮೂಲ ಖರೀದಿದಾರರು ಸದರಿ ವಾಹನವನ್ನು ಮಾರಾಟ ಮಾಡಿರುವುದಾಗಿ ತಿಳಿಸುತ್ತಾ, ವಾಹನ ಪಡೆದ ವ್ಯಕ್ತಿಯ ವಿಳಾಸವನ್ನು ನೀಡಿರುತ್ತಾರೆ. ವಿಳಾಸ ನೀಡಿದ ವ್ಯಕ್ತಿಗೆ ನೊಂದಾಯಿತ ಅಂಚೆ ಮೂಲಕ ದಿನಾಂಕ: 17.05.2004, 20.08.2004 ಮತ್ತು 09.11.2004 ರಂದು ನೋಟೀಸ್‌ಗಳನ್ನು ನೀಡಲಾಗಿದ್ದು, ನೋಟೀಸ್‌ಗಳು ಸ್ವೀಕೃತಗೊಂಡಿರುತ್ತವೆ. ವಿಚಾರ ತಿಳಿದಿದ್ದಾಗ್ಯೂ ಸದರಿಯವರು ಜವಾಬಾಗಲೀ ಅಥವಾ ಖುದ್ದು ಈ ನ್ಯಾಯಾಲಯಕ್ಕೆ ಬಂದು ಹೇಳಿಕೆಯನ್ನಾಗಲೀ ನೀಡಿರುವುದಿಲ್ಲ. ಸಾಕಷ್ಟು ಕಾಲಾವಕಾಶ ಕೊಟ್ಟರೂ, ಸದರಿ ವಾಹನದ ಬಗ್ಗೆ ತಮ್ಮ ಮಾಲೀಕತ್ವವನ್ನು ದೃಢೀಕರಿಸಿ ವಾಹನವನ್ನು ವಶಕ್ಕೆ ಇದುವರೆಗೆ ಕೋರದೇ ಇರುವುದನ್ನು ನೋಡಿದರೆ, ಈ ವಾಹನ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿ, ಉಪಯೋಗಿಸಲ್ಪಟ್ಟಂತಹ ವಾಹನವೆಂದು ದೃಢವಾಗುತ್ತದೆ. ವಾಹನದ ಮಾಲೀಕರು ಮಾಲೀಕತ್ವದ ಬಗ್ಗೆ, ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ಥರಲ್ಲವೆಂಬುದನ್ನು ಸಾಬೀತುಪಡಿಸಲು ವಿಫಲರಾದ ಕಾರಣ, ಮೇಲ್ಕಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಶ್ರೀ ಜಿ. ಎ. ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ ಈ ಪ್ರಕರಣದಲ್ಲಿ

ಅಮಾನತ್ತುಪಡಿಸಿರುವ ಮೇಟಡೋರ್ ನೋಂದಣಿ ಸಂಖ್ಯೆ:KA-20-3325 (ಎಂಜೀನ್ ಸಂಖ್ಯೆ: 616969114396, ಛಾಸಿಸ್ ಸಂಖ್ಯೆ 616FD743313A95) ಶ್ರೀಗಂಧದ ತುಂಡುಗಳು ಮತ್ತು ಚಕ್ಕೆ 135=129.000 ಕೆ.ಜಿ.ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡಿರುವ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧದ ತುಂಡುಗಳು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ.

ಈ ಆದೇಶವನ್ನು ಹೊರಡಿಸಿದ 30 ದಿನಗಳೊಳಗೆ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದಿದ್ದರೆ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ದಿನಾಂಕ: 01.01.2005 ರಂದು ಬೆರಳಚ್ಚಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ. ಎ. ಎನ್. ಕರ್ಕೇಕರ್**

ಪಿ.ಆರ್.118 ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ.

## ಉಪ ಅರಣ್ಯ, ಸಂರಕ್ಷಣಾಧಿಕಾರಿಯವರ ಕಛೇರಿ, ಭದ್ರಾವತಿ ವಿಭಾಗ, ಭದ್ರಾವತಿ

**ತಿದ್ದುಪಡಿ ಆದೇಶ ಸಂಖ್ಯೆ: ಬಿ4:71ಎ:ಸಿಆರ್:1:04-05 ದಿನಾಂಕ: 3ನೇ ಜನವರಿ 2005**

**ವಿಷಯ :** ಭದ್ರಾವತಿ ವಿಭಾಗದಲ್ಲಿ ಅರಣ್ಯ ಮೊಕದ್ದಮೆಯಲ್ಲಿ ಅಮಾನತ್ತುಪಡಿಸಿ ಸರ್ಕಾರಕ್ಕೆ ಮುಟ್ಟುಗೋಲು ಮಾಡಿಕೊಂಡ ವಾಹನಗಳ ಟೆಂಡರ್ ಕಂ ಬಹಿರಂಗ ಹರಾಜು.

**ಉಲ್ಲೇಖ :** 1. ಈ ಕಛೇರಿ ಸಂಕ್ಷಿಪ್ತ ಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ ಸಮಸಂಖ್ಯೆ: ದಿನಾಂಕ: 8.12.04.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಈ ವಿಭಾಗದ ಅರಣ್ಯ, ಅಪರಾಧ ಪ್ರಕರಣದಲ್ಲಿ ವಶಪಡಿಸಿಕೊಂಡು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಮಾಡಿದ ವಾಹನಗಳನ್ನು ಬಹಿರಂಗ ಹರಾಜು ಮಾಡಲು ಉಲ್ಲೇಖ ಪತ್ರದಲ್ಲಿ ದಿನಾಂಕವನ್ನು ಗೊತ್ತುಪಡಿಸಿ ಹರಾಜು ಪ್ರಕಟಣೆಯನ್ನು ಹೊರಡಿಸಿರುತ್ತದೆ.

ಸದರಿ ಪ್ರಕಟಣೆಯಲ್ಲಿ ಭದ್ರಾವತಿ ವಲಯದ ಕ್ರಮಸಂಖ್ಯೆ: 15ಕ್ಕೆ ಸಂಬಂಧಿಸಿದ ಇಂಡಿಕಾ ಕಾರು ವಾಹನದ ನೋಂದಾವಣೆ ಸಂಖ್ಯೆ: ಕೆಎಲ್-11-ಜೆ-1820 ಎಂದು ತಪ್ಪಾಗಿ ನಮೂದಾಗಿರುತ್ತದೆ. ಸದರಿ ವಾಹನದ ಅಸಲು ಸಂಖ್ಯೆ: ಕೆಎಲ್-11-ಜೆ-8777 ಎಂದು ಓದಿಕೊಳ್ಳಲು ಕೋರಿದೆ.

ಪಿ.ಆರ್.119 ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ.

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-2, ಬಿಜಾಪುರ

**ಪ್ರಕರಣದ ಸಂಖ್ಯೆ: ಕಾಅಬ: ಕಾನಪ:4/05 ದಿನಾಂಕ: 7ನೇ ಜನವರಿ 2005**

| ಅರ್ಜಿದಾರರು : | ವಿರುದ್ಧ | ಪ್ರತಿವಾದಿಗಳು: |
|---|---|---|
| 1. ಜೀಜಾಬಾಯಿ ಧೊಂಡಿಬಾ ಲಾವಟೆ ಮತ್ತಿತರರು | | 1. ಶಾಲನ ಉತ್ತಮ ಜಾದವ ಲಾರಿ ಮಾಲೀಕರು ಎಂ. ಸಿ. ಯಾರ್ಡ್ ಬಿಜಾಪೂರ<br>2. ಯೂನೈಟೆಡ್ ಇನ್‌ಶ್ಯೂರೆನ್ಸ್ ಕಂ.ಲಿ., ವಿಜಾಪೂರ |

**ಪ್ರಕಟಣೆ:**

ಶ್ರೀಮತಿ ಜೀಜಾಬಾಯಿ ಧೋಂಡಿಬಾ ಲಾವಟೆ ಮತ್ತು ಅಪ್ರಾಪ್ತ ಮಕ್ಕಳು ಇವರುಗಳಾದ ತಾವು ಮೃತ ಧೊಂಡಿಬಾ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಧೋಂಡಿಬಾ ಇವರು ಒಂದನೇ ಪ್ರತಿವಾದಿಗಳಾದ ಶಾಲನ ಉತ್ತಮ ಜಾದವ ಇವರ ಮಿನಿಟ್ರಕ್ ರಲ್ಲಿ ಕೂಲಿ (ಹಮಾಲ) ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಪಿ.ಆರ್.120 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-2, ಬಿಜಾಪುರ

**ಪ್ರಕರಣದ ಸಂಖ್ಯೆ: ಕಾಅಬ: ಕಾನಪ:5/05 ದಿನಾಂಕ: 7ನೇ ಜನವರಿ 2005**

| ಅರ್ಜಿದಾರರು : | ವಿರುದ್ಧ | ಪ್ರತಿವಾದಿಗಳು: |
|---|---|---|
| 1. ಚಂದ್ರಕಾಂತ ದಾದಾ ಜಾಧವ ಮತ್ತು ಅಪ್ರಾಪ್ತ ಮಕ್ಕಳು<br>2. ಸುಮನ ಚಂದ್ರಕಾಂತ ಜಾದವ ಬಿಜಾಪುರ | | 1. ಸ್ವಾತಿ ರಾಮಹರಿ ಗುಳೆ ಜೀಪು ಮಾಲೀಕರು ನಾಗಪುರ ಮಹಾರಾಷ್ಟ್ರ<br>2. ಯೂನೈಟೆಡ್ ಇಂಡಿಯಾ ಇನ್‌ಶೂರೆನ್ಸ್ ಕಂ.ಲಿ. ಮ್ಯಾನೇಜರ್ ಬಿಜಾಪುರ. |

**ಪ್ರಕಟಣೆ:**

ಶ್ರೀ ಚಂದ್ರಕಾಂತ ದಾದಾ ಜಾದವ, ಸುಮನ ಚಂದ್ರಕಾಂತ ಜಾದವ ಮತ್ತು ಮಕ್ಕಳು ಇವರುಗಳಾದ ತಾವು ಮೃತ ಸಂತೋಷ ಇವರ ತಂದೆ ತಾಯಿ ಮತ್ತು ಸಹೋದರರು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸಂತೋಷ ಇವರು ಒಂದನೇ ಪ್ರತಿವಾದಿಗಳಾದ ಸ್ವಾತಿ ರಾಮಹರಿ ಗುಳೆ ಇವರ ಜೀಪಿನಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಪಿ.ಆರ್.121 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.